**ಓದಲಾಗಿದೆ:**
1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರ ಪತ್ರ ಸಂ: ಜಿಪಂ: ಉಕಾ1:ಸಿ-5: ಸಿಆರ್-44: 94-95, ದಿನಾಂಕ: 2.7.97.
2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರ ಪತ್ರ ಸಂ: ಹಾಜಿಪಂ: ಉಕಾ: ಸಿಬ್ಬಂದಿ-2:ಇವಿ:ವಹಿ 15:98-99, ದಿ: 8.10.2003.
3) ಶ್ರೀ ಜಿ. ರಾಮಪ್ಪ, ಅಂದಿನ ಕಿರಿಯ ಇಂಜಿನಿಯರ್ ಇವರಿಗೆ ಜಾರಿಗೊಳಿಸಿರುವ 2ನೇ ಕಾರಣ ಕೇಳುವ ನೋಟೀಸ್ ಸಂ: ಗ್ರಾಅಪ 33 ಇಎನ್‌ಕ್ಯೂ 03, ದಿ: 31.12.03.
4) ಶ್ರೀ ಜಿ. ರಾಮಪ್ಪ, ಹಿಂದಿನ ಕಿರಿಯ ಇಂಜಿನಿಯರ್ ಇವರ ದಿ: 15.4.04ರ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಶ್ರೀ ಜಿ. ರಾಮಪ್ಪ, ಅಂದಿನ ಕಿರಿಯ ಇಂಜಿನಿಯರ್, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಾರ್ಯಾಲಯ, ಹಿರೇಕೆರೂರು ಇವರು ಹಿರೇಕೆರೂರು ತಾಲ್ಲೂಕಿನಲ್ಲಿ ವಿವಿಧ ವಸತಿ ಯೋಜನೆಗಳಡಿಯಲ್ಲಿ ಸರ್ಕಾರಿ ಹಣವನ್ನು ದುರುಪಯೋಗಪಡಿಸಿಕೊಂಡಿದ್ದರೆಂಬ ಬಗ್ಗೆ ಸದರಿಯವರ ವಿರುದ್ಧದ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆ ಹೂಡಿ ವಿವರವಾದ ವಿಚಾರಣೆ ನಡೆಸಲು ಜಿಲ್ಲಾಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಧಾರವಾಡ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ನೇಮಕ ಮಾಡಿದ್ದರು. ಅದರಂತೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ದಿನಾಂಕ: 22.1.2001 ರಂದು ಸಲ್ಲಿಸಿದ ವಿಚಾರಣಾ ವರದಿಯನ್ನು ಪರಿಶೀಲಿಸಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರು ನಿಯಮ 11ಎ ರಂತೆ ಅವರು ತಮ್ಮದೆ ಆದ ನಿರ್ಣಯಗಳನ್ನು ದಾಖಲಿಸಿ, ಆಪಾದಿಸಲಾಗಿದ್ದಂತೆ ಆಪಾದಿತರಿಂದ ಒಟ್ಟು ರೂ. 5,01,637.00 ಗಳ ಹಣಕಾಸಿನ ನಷ್ಟವುಂಟಾಗಿದೆಯೆಂದು ನಿರ್ಧರಿಸಿ, ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲು ಕಠಿಣ ದಂಡನೆಗಳನ್ನು ವಿಧಿಸಲು ಅವರಿಗೆ ಅಧಿಕಾರವಿಲ್ಲದ್ದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ವಿಚಾರಣಾ ವರದಿಯನ್ನು ಒಪ್ಪದೆ ನಿಯಮ-11ಎ ರಂತೆ ಸರ್ಕಾರ ತನ್ನದೇ ಆದ ನಿರ್ಣಯಗಳನ್ನು ದಾಖಲಿಸಿ, ಆಪಾದಿತರ ಮೇಲಿನ ಆಪಾದನೆ ರುಜುವಾತಾಗುತ್ತವೆಂದು ನಿರ್ಣಯಿಸಿ, ಸದರಿ ನಿರ್ಣಯದೊಂದಿಗೆ ಆಪಾದಿತರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ರಂತೆ ಅವರಿಗೆ 2ನೇ ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಿತ್ತು. ಆಪಾದಿತರಾದ ಶ್ರೀ ಜಿ. ರಾಮಪ್ಪ ಇವರು ಸರ್ಕಾರದಿಂದ ಜಾರಿಗೊಳಿಸಿದ್ದ 2ನೇ ಕಾರಣ ಕೇಳುವ ನೋಟೀಸ್‌ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (4) ರಂತೆ ಉತ್ತರಿಸಿ, ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ ಹಾಗೂ ತಮ್ಮನ್ನು ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ. ಆದರೆ ಅವರು ತಮ್ಮ ಲಿಖಿತ ಹೇಳಿಕೆಗಳನ್ನು ಸಮರ್ಥಿಸಿಕೊಳ್ಳಲು ಯಾವುದೇ ದಾಖಲೆಗಳನ್ನು ಒದಗಿಸಿರುವುದಿಲ್ಲ. ಆಪಾದಿತರ ಮೇಲಿನ ಆರೋಪ, ವಿಚಾರಣಾಧಿಕಾರಿಗಳ ಅಭಿಪ್ರಾಯ ಹಾಗೂ ಸದರಿ ಅಭಿಪ್ರಾಯದ ಬಗ್ಗೆ ಸರ್ಕಾರದ ನಿರ್ಣಯ ಈ ಕೆಳಕಂಡಂತಿದೆ.

**ಆಪಾದನೆ-1:**

ಆಪಾದಿತರು ವರ್ಗಾವಣೆಗೊಂಡ ನಂತರ ದಿ: 28.10.94 ರಂದು ಬಿಡುಗಡೆಯಾಗುವ ಮುನ್ನ ಪೂರ್ಣ ಪ್ರಮಾಣದ ಪ್ರಭಾರವನ್ನು ಇನ್ನೊಬ್ಬ ಕಿರಿಯ ಇಂಜಿನಿಯರ್ ರವರಿಗೆ ವಹಿಸಿಕೊಡದೆ ಇರುವುದು.

ವಿವರವಾದ ವಿಚಾರಣೆಯಲ್ಲಿ ಅವರ ಮೇಲಿನ ಆಪಾದನೆಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಕ್ಕೆ ಬಂದಿರುತ್ತಾರಾದರೂ ಅವರು ಹಿರೇಕೆರೂರು, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಾರ್ಯಾಲಯದಿಂದ ವರ್ಗಾವಣೆಯಾಗಿ ಬಿಡುಗಡೆಯಾದ ನಂತರ ಅವರು ನಿರ್ವಹಿಸುತ್ತಿದ್ದ ಎಂ.ಬಿ. ಪುಸ್ತಕವನ್ನು ಮುಂದುವರೆಸಿರುವುದು ಸ್ಪಷ್ಟವಾಗುತ್ತದೆ. ಆದರೆ ಅವರು ಅಪೂರ್ಣಗೊಳಿಸಿದ ಕಾಮಗಾರಿಗಳನ್ನು ಮುಂದುವರೆಸಿ ಅವುಗಳ ಅಳತೆಯನ್ನು ದಾಖಲಿಸಿ ಕಾಮಗಾರಿಗಳನ್ನು ಪೂರ್ಣಗೊಳಿಸಿರುವ ಬಗ್ಗೆ ಯಾವುದೇ ಅಂಶ ಸ್ಪಷ್ಟವಾಗಿರುವುದಿಲ್ಲ. ಅವರು ಪ್ರಭಾರ ವಹಿಸಿಕೊಟ್ಟ ಬಗ್ಗೆ ದಾಖಲೆಗಳನ್ನು ವಿಚಾರಣೆಗಾಗಿ ಹಾಜರುಪಡಿಸದೆ ಇರುವುದು ಕಂಡು ಬರುತ್ತದೆ. ಅವರು ಬಿಡುಗಡೆ ಹೊಂದಿದ ನಂತರ ಪ್ರಭಾರ ವಹಿಸಿಕೊಡಲು ಹಿರೇಕೆರೂರಿಗೆ ಹೋಗಿರುವುದು ದಾಖಲೆಗಳಿಂದ ತಿಳಿದು ಬರುತ್ತದೆಂದು ವಿಚಾರಣಾಧಿಕಾರಿಗಳು ತಿಳಿಸಿದ್ದರಾದರೂ ವಿಚಾರಣೆಗೆ ಹಾಜರಾದ ಎಲ್ಲಾ ಸಾಕ್ಷಿದಾರರು ಕೂಡ ಅವರು ನಿರ್ವಹಿಸಿದ ಎಂ.ಬಿ. ಪುಸ್ತಕಗಳನ್ನು ಕಾರ್ಯಾಲಯದಿಂದ ಮುಂದುವರೆಸಿರುವುದಾಗಿ ಮಾತ್ರ ತಿಳಿಸಿದ್ದಾರೆ. ಆದರೆ ಅವರು ನಿರ್ವಹಿಸಿದ ಕಾಮಗಾರಿಗಳನ್ನು ಮುಂದುವರೆಸಿರುವ ಬಗ್ಗೆ ಸಾಕ್ಷಿ ಹೇಳಿಕೆಯಲ್ಲಿ ತಿಳಿಸಿರುವುದಿಲ್ಲ. ಶ್ರೀ ಸಾವಳಗಿ ಕಿರಿಯ ಇಂಜಿನಿಯರ್ ಇವರ ಹೇಳಿಕೆಯನ್ನು ಪರಿಶೀಲಿಸಲಾಗಿ, ಕಾಮಗಾರಿಗಳ ಬಗ್ಗೆ ಸರಿಯಾಗಿ ಎಂ.ಎ.ಎಸ್. ಲೆಕ್ಕವನ್ನು ನೀಡದ್ದರಿಂದ ಪ್ರಭಾರ ತೆಗೆದುಕೊಂಡಿಲ್ಲವೆಂದು ಕಂಡು ಬರುತ್ತದೆ. ಅವರು ಹಿರೇಕೆರೂರು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಾರ್ಯಾಲಯಕ್ಕೆ ಹೋದರೂ ಸಹ ಸಂಬಂಧಿಸಿದ ಕಿರಿಯ ಇಂಜಿನಿಯರ್‌ರವರು ಸಹಕರಿಸಿಲ್ಲವೆಂಬ ಅಭಿಪ್ರಾಯ ಸರಿಯಾಗಿರುವುದಿಲ್ಲ. ಅವರು ಪ್ರಗತಿಗಿಂತ ಹೆಚ್ಚಿನ ಖರ್ಚು ಹಾಕಿದ್ದರಿಂದಲೇ ಪ್ರಭಾರ ವಹಿಸಿಕೊಳ್ಳಲು ನಿರಾಕರಿಸಿರುವುದು ತಿಳಿದು ಬರುತ್ತದೆ. ವಿಚಾರಣೆಯಲ್ಲಿ ಮಂಡನಾಧಿಕಾರಿಗಳ ಹೇಳಿಕೆಯನ್ನು ಪಡೆದುಕೊಂಡ ಬಗ್ಗೆಯಾಗಲಿ ಅಥವಾ ಅವರ ಹೇಳಿಕೆ ವಿಶ್ಲೇಷಣೆಯನ್ನಾಗಲಿ ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ನಮೂದಿಸಿರುವುದಿಲ್ಲ. ಮೇಲಿನಂತೆ ಅವರು ಕರ್ತವ್ಯ ನಿರ್ವಹಿಸುವಲ್ಲಿ ವಿಫಲರಾಗಿರುವುದರಿಂದ ಅವರ ಮೇಲಿನ ಈ ಆರೋಪ ಸಾಬೀತಾಗುತ್ತದೆಂದು ಶಿಸ್ತು ಪ್ರಾಧಿಕಾರವಾದ ಸರ್ಕಾರವು ನಿಯಮ 11(ಎ) ಪ್ರಕಾರ ನಿರ್ಣಯಿಸಿದೆ.

**ಆಪಾದನೆ-2:**

1993-94ನೇ ಸಾಲಿನ ಹೆಚ್ಚುವರಿ ಜವಾಹರ್ ರೋಜಗಾರ್ ಯೋಜನೆಯಡಿ ದೇವದಾಸಿಯರ ಪುನರ್ವಸತಿಗಾಗಿ 100 ಮನೆಗಳ ಪ್ರಭಾರವನ್ನು ಆರೋಪಿತ ನೌಕರರು ವರ್ಗಾವಣೆಗೊಂಡ ಸಂಬಂಧಪಟ್ಟ ಕಿರಿಯ ಇಂಜಿನಿಯರ್‌ರಿಗೆ ವಹಿಸಿಕೊಡದೆ ಇದ್ದುದರಿಂದ ರೂ. 1,68,566.00 ಗಳ ಹೆಚ್ಚಿನ ಹಣದ ಅವಶ್ಯಕತೆ ಉಂಟು ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿರುವುದು.

ವಿಚಾರಣಾಧಿಕಾರಿಗಳ ವರದಿಯಲ್ಲಿ ಅವರ ಮೇಲಿನ ಈ ಆಪಾದನೆ ರುಜುವಾತಾಗುವುದಿಲ್ಲವೆಂದು ಅಭಿಪ್ರಾಯ ಪಟ್ಟಿದ್ದರೂ ಆಪಾದಿಸಲಾದಂತೆ 1993-94ನೇ ಸಾಲಿನ ಹೆಚ್ಚುವರಿ ಜವಾಹರ್ ರೋಜಗಾರ್ ಯೋಜನೆಯಡಿ ದೇವದಾಸಿಯರ ಪುನರ್ವಸತಿಗಾಗಿ 100 ಮನೆಗಳ ಪ್ರಭಾರವನ್ನು ಅವರು ವರ್ಗಾವಣೆಗೊಂಡ ನಂತರ ಸಂಬಂಧಿಸಿದ ಕಿರಿಯ ಇಂಜಿನಿಯರ್‌ರು ಪ್ರಭಾರ ವಹಿಸಿಕೊಡದೇ ಇರುವುದರಿಂದ 1,68,566.00 ರೂ.ಗಳ ಹೆಚ್ಚಿನ ಹಣದ ಅವಶ್ಯಕತೆ ಉಂಟು ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿದ ಕುರಿತು ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಪರಿಶೀಲಿಸಲಾಗಿ, ವಿಚಾರಣೆಗೆ ಒಳಪಡಿಸಿರುವ 3 ಸಾಕ್ಷಿದಾರರ ಹೇಳಿಕೆಯಂತೆ ಅವರು ವರ್ಗಾವಣೆಯಾಗಿ ಬಿಡುಗಡೆಯಾಗುವ ಪೂರ್ವದಲ್ಲಿ ಅಥವಾ ನಂತರವಾಗಲಿ ನಿಗದಿತ ಅವಧಿಯೊಳಗಾಗಲಿ ಪ್ರಭಾರವನ್ನು ಏಕೆ ವಹಿಸಿಕೊಡಲಿಲ್ಲ ಎಂಬ ಬಗ್ಗೆ ವಿಚಾರಣೆ ವರದಿಯಲ್ಲಿ ಸ್ಪಷ್ಟವಾದ ಅಂಶಗಳು ಕಂಡು ಬರುವುದಿಲ್ಲ. ಅಲ್ಲದೆ ಪ್ರಭಾರ ವಹಿಸಲು ಸಾಕಷ್ಟು ಸಾರಿ ನೋಟೀಸ್ ನೀಡಿರುವುದು ಹಾಗೂ ವರ್ಗಾವಣೆಗೊಂಡ ಕಛೇರಿಯ ಮೇಲಾಧಿಕಾರಿಗಳಿಗೆ ಪತ್ರ ವ್ಯವಹಾರ ಮಾಡಿದಾಗಲೂ ಸಹ ಪ್ರಭಾರ ವಹಿಸದೆ ಇರುವ ಅಂಶ ಸ್ಪಷ್ಟವಾಗುತ್ತದೆ. ಶಿಸ್ತು ಪ್ರಾಧಿಕಾರದ ಪರವಾಗಿ ಹಾಜರಾದ ಮಂಡನಾಧಿಕಾರಿಗಳ ಲಿಖಿತ ವಾದವನ್ನು ವಿಚಾರಣಾಧಿಕಾರಿಗಳು ಪಡೆದುಕೊಳ್ಳದೆ ಅವರ ಮೇಲಿನ ಆಪಾದನೆ ಸಾಬೀತಾಗಿರುವುದಿಲ್ಲವೆಂಬ ಅಭಿಪ್ರಾಯಕ್ಕೆ ಬಂದಿರುವುದನ್ನು ಸರ್ಕಾರವು ಒಪ್ಪದೆ ಮೇಲೆ ಹೇಳಲಾದಂತೆ ಅವರ ಮೇಲಿನ ಈ ಆರೋಪ ಸಾಬೀತಾಗುತ್ತದೆಂದು ಶಿಸ್ತು ಪ್ರಾಧಿಕಾರವಾದ ಸರ್ಕಾರವು ನಿಯಮ 11(ಎ) ಪ್ರಕಾರ ನಿರ್ಣಯಿಸಿದೆ.

**ಆಪಾದನೆ-3:**

1993-94ನೇ ಸಾಲಿನ ಆಶ್ರಯ, ಅಂಬೇಡ್ಕರ್ ಯೋಜನೆಯಡಿಯಲ್ಲಿ ಮನೆಗಳನ್ನು ಪೂರ್ಣಗೊಳಿಸದ ಬಗ್ಗೆ ಮತ್ತು ಕೆಲವೊಂದು ಮನೆಗಳಿಗೆ ಪೂರ್ತಿ ಹಣ ಖರ್ಚು ಹಾಕಿದ್ದರೂ ಸಹ ಮನೆಗಳು ಅಪೂರ್ಣಗೊಂಡು ಸರ್ಕಾರಕ್ಕೆ ರೂ. 1,08,925.00 ಗಳ ನಷ್ಟವುಂಟು ಮಾಡಿರುವ ಬಗ್ಗೆ.

ವಿಚಾರಣಾಧಿಕಾರಿಗಳ ವರದಿಯಲ್ಲಿ ಅವರ ಮೇಲಿನ ಈ ಆಪಾದನೆ ರುಜುವಾತಾಗುವುದಿಲ್ಲವೆಂದು ಅಭಿಪ್ರಾಯಪಟ್ಟಿದ್ದರೂ ವಿಚಾರಣಾಧಿಕಾರಿಗಳು ಇಲ್ಲಿ ಅವರ ಹೇಳಿಕೆಯನ್ನು ಮಾತ್ರ ದಾಖಲಿಸಿದ್ದಾರೆ. ಆದರೆ ಅವರು ಪ್ರಭಾರ ವಹಿಸದೆ ಇದ್ದುದರಿಂದ ಸರ್ಕಾರಕ್ಕೆ ಹಾನಿಯಾಗಿದೆ ಎಂಬುದಾಗಿ ನಮೂದಿಸಿರುವುದಿಲ್ಲ. ಅತಿವೃಷ್ಟಿಯಿಂದ ಮನೆಗಳು ಬಿದ್ದಿರುವುದಾಗಿ ಮತ್ತು ಬಿದ್ದಿರುವ ಮನೆಗಳನ್ನು ಅವರಿಂದ ಪುನರ್ ನಿರ್ಮಾಣ ಮಾಡಲು ಆದೇಶಿಸಿರುವಂತೆ ಕೋರಿರುವ ಪತ್ರವನ್ನು ವಿಚಾರಣಾಧಿಕಾರಿಗಳು ವಿಚಾರಣೆ ಸಮಯದಲ್ಲಿ ದಾಖಲೆಯೆಂದು ತೆಗೆದುಕೊಂಡು ಗುರುತು ಮಾಡಿರುವುದಿಲ್ಲ. ಅಲ್ಲದೆ ವಿಚಾರಣಾಧಿಕಾರಿಗಳು ಈ ಆರೋಪಕ್ಕೆ ಸಂಬಂಧಿಸಿದಂತೆ ಸಾಕ್ಷಿಗಳ ವಿಚಾರಣೆ ಮಂಡನಾಧಿಕಾರಿಗಳ ವಾದವನ್ನು ಮಂಡಿಸಲು ಅವಕಾಶ ನೀಡಿದಂತೆ ಕಂಡುಬರುವುದಿಲ್ಲ. ಆದ್ದರಿಂದ, ಸದರಿ ಕಾರಣಗಳಿಂದಾಗಿ ಅವರ ಮೇಲಿನ ಈ ಆರೋಪ ಸಾಬೀತಾಗುತ್ತದೆಂದು ಶಿಸ್ತು ಪ್ರಾಧಿಕಾರವಾದ ಸರ್ಕಾರವು ನಿಯಮ 11(ಎ) ಪ್ರಕಾರ ನಿರ್ಣಯಿಸಿದೆ.

**ಆಪಾದನೆ-4:**

ಆಶ್ರಯ, ಅಂಬೇಡ್ಕರ್ ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಿಸಿಕೊಂಡ ಫಲಾನುಭವಿಗಳಿಗೆ ರೂ. 2,24,156.00 ಗಳನ್ನು ಸಂದಾಯ ಮಾಡಿ ದುರುಪಯೋಗಪಡಿಸಿಕೊಂಡಿರುವುದು.

ವಿಚಾರಣಾಧಿಕಾರಿಗಳ ವರದಿಯಲ್ಲಿ ಅವರ ಮೇಲಿನ ಈ ಆಪಾದನೆ ರುಜುವಾತಾಗುವುದಿಲ್ಲವೆಂದು ಅಭಿಪ್ರಾಯಪಟ್ಟಿದ್ದರೂ ಈ ಆರೋಪ ಕುರಿತು ವಿಚಾರಣಾಧಿಕಾರಿಗಳು ನೀಡಿರುವ ವರದಿಯಲ್ಲಿ ಕಡತದಲ್ಲಿನ ದಾಖಲೆಗಳನ್ನು ಪರಿಶೀಲಿಸಿ ಅಭಿಪ್ರಾಯ ನೀಡದಿರುವುದು ಕಂಡು ಬರುತ್ತದೆ. ವಿಚಾರಣಾಧಿಕಾರಿಗಳು ಸಾಕ್ಷಿದಾರರ ಹೇಳಿಕೆಗಳನ್ನು ನಮೂದಿಸದೆ ರಕ್ಷಣ ಸಹಾಯಕರಿಂದ ನಡೆದ ಪಾಟಿ ಸವಾಲಿನ ಅಂಶಗಳನ್ನು ನಮೂದಿಸಿರುತ್ತಾರೆ. ವಿಚಾರಣಾಧಿಕಾರಿಗಳು ಮಂಡನಾಧಿಕಾರಿಗಳ ವಾದವನ್ನು ಪಡೆದುಕೊಂಡು ವರದಿಯಲ್ಲಿ ದಾಖಲಿಸಿರುವುದಿಲ್ಲ ಹೀಗಾಗಿ ವಿಚಾರಣಾಧಿಕಾರಿಗಳು ಆರೋಪ ಸ್ಥಿರ ಪಡುವುದಿಲ್ಲವೆಂದು ನೀಡಿದ ಅಭಿಪ್ರಾಯವು ಕೇವಲ ಕಾಲ್ಪನಿಕವಾಗಿರುವುದೆಂದು ಕಂಡು ಬರುತ್ತದೆ. ಆದ್ದರಿಂದ ಅವರ ಮೇಲೆ ಆಪಾದಿಸಲಾದಂತೆ ಈ ಆರೋಪ ಸಾಬೀತಾಗುತ್ತದೆಂದು ಶಿಸ್ತು ಪ್ರಾಧಿಕಾರವಾದ ಸರ್ಕಾರವು ನಿಯಮ 11(ಎ) ಪ್ರಕಾರ ನಿರ್ಣಯಿಸಿದೆ.

**ಆಪಾದನೆ-5:**

ಆಪಾದಿತರು ವರ್ಗಾವಣೆಯಾಗಿ ಬಿಡುಗಡೆ ಹೊಂದಿ ಬೇರೆ ಕಾರ್ಯಾಲಯಕ್ಕೆ ಹಾಜರಾದ ನಂತರ ಪ್ರಭಾರ ವಹಿಸಲು ದಿ: 9.2.95 ರಿಂದ 28.2.95 ರವರೆಗೆ, 4.9.95 ರಿಂದ 8.9.95 ರವರೆಗೆ ಹಾಗೂ ದಿ: 5.10.95 ರಿಂದ 28.10.95 ರವರೆಗೆ ಹಿರೇಕೆರೂರ್ ತಾಲ್ಲೂಕು ಪಂಚಾಯತ್ ಕಛೇರಿಯಲ್ಲಿ ಹಾಜರಾಗಿದ್ದರೂ ಸಹಿತ ಸಂಬಂಧಪಟ್ಟ ಕಿರಿಯ ಇಂಜಿನಿಯರ್‌ರಿಗೆ ಪ್ರಭಾರವನ್ನು ವಹಿಸಿರುವುದಿಲ್ಲ.

ವಿಚಾರಣಾಧಿಕಾರಿಗಳ ವರದಿಯಲ್ಲಿ ಅವರ ಮೇಲಿನ ಈ ಆಪಾದನೆ ರುಜುವಾತಾಗುವುದಿಲ್ಲವೆಂದು ಅಭಿಪ್ರಾಯಪಟ್ಟಿದ್ದರೂ ಆರೋಪದಲ್ಲಿಯೇ ತಿಳಿಸಿರುವಂತೆ ಅವರು ವರ್ಗಾವಣೆಯಾಗಿ ಬಿಡುಗಡೆ ಹೊಂದಿ ಬೇರೆ ಕಾರ್ಯಾಲಯಕ್ಕೆ ಹಾಜರಾದ ನಂತರ ಪ್ರಭಾರ ವಹಿಸಲು ದಿ: 9.2.95 ರಿಂದ 28.2.95 ರವರೆಗೆ, 4.9.95 ರಿಂದ 8.9.95 ರವರೆಗೆ ಹಾಗೂ ದಿ: 5.10.95 ರಿಂದ 28.10.95 ರವರೆಗೆ ಹಿರೇಕೆರೂರ್ ತಾಲ್ಲೂಕು ಪಂಚಾಯತ್ ಕಛೇರಿಯಲ್ಲಿ ಹಾಜರಾಗಿದ್ದರೂ ಸಹಿತ ಪ್ರಭಾರವನ್ನು ಏಕೆ ವಹಿಸಿರುವುದಿಲ್ಲವೆಂಬ ಬಗ್ಗೆ ವಿಚಾರಣಾಧಿಕಾರಿಗಳು ಸಲ್ಲಿಸಿದ ವರದಿಯಲ್ಲಿ ತಮ್ಮ ಅಭಿಪ್ರಾಯ ಸ್ಪಷ್ಟಪಡಿಸಿರುವುದಿಲ್ಲ. ಸಾಕ್ಷಿದಾರರು ತಮ್ಮ ಹೇಳಿಕೆಯಲ್ಲಿ ಆರೋಪಿತ ನೌಕರರು ಪ್ರಭಾರ ವಹಿಸಲು ಬಂದಿರುವುದಾಗಿ ಒಪ್ಪಿಕೊಂಡಿರುತ್ತಾರೆಂದು ತಿಳಿಸಿ ಆರೋಪಿತರು ಗೈರುಹಾಜರಾದ ಬಗ್ಗೆ ಯಾರೂ ವರದಿ ಮಾಡಿರುವುದಿಲ್ಲವೆಂದು ತಿಳಿಸಿ ಈ ಅವಧಿಯ ರಜೆಯನ್ನು ಮಂಜೂರು ಮಾಡಿ ರಜಾ ವೇತನವನ್ನು ಪಾವತಿಸಿರುವುದಾಗಿ ನೌಕರರು ಹೇಳಿರುವುದರಿಂದ ಆರೋಪ ಸ್ಥಿರಪಡುವುದಿಲ್ಲವೆಂಬ ಅಭಿಪ್ರಾಯಕ್ಕೆ ಬಂದಿರುವುದು ಸಮಂಜಸವೆನಿಸುವುದಿಲ್ಲ. ಅವರು ದಿ: 21.10.95 ರಿಂದ 3 ಸಾರಿ ಹಿರೇಕೆರೂರು ಕಾರ್ಯಾಲಯಕ್ಕೆ ಪ್ರಭಾರ ವಹಿಸುವ ಸಲುವಾಗಿ ಹಾಜರಾಗಿದ್ದರೂ ಪ್ರಭಾರವನ್ನು ಇನ್ನೊಬ್ಬ ಕಿರಿಯ ಇಂಜಿನಿಯರ್‌ರಿಗೆ ಏಕೆ ವಹಿಸಲಾಗಿಲ್ಲವೆಂಬ ಬಗ್ಗೆ ಸ್ಪಷ್ಟವಾಗಿ ಅಭಿಪ್ರಾಯ ನೀಡಲು ವಿಚಾರಣಾಧಿಕಾರಿಗಳು ವಿಫಲರಾಗಿದ್ದಾರೆ. ಅಲ್ಲದೆ

ಕೇವಲ ಆರೋಪಿತ ನೌಕರರ ಹೇಳಿಕೆಯನ್ನು ಪಡೆದುಕೊಂಡು ಅದನ್ನು ವರದಿಯಲ್ಲಿ ದಾಖಲಿಸಿ ಅಭಿಪ್ರಾಯ ನೀಡಿದ್ದಾರೆ. ಮಂಡನಾಧಿಕಾರಿಗಳ ವಾದವನ್ನು ಹಾಗೂ ಸಾಕ್ಷಿದಾರರು ಯಾರು ಎಂಬ ಬಗ್ಗೆ ನಮೂದಿಸದೆ ಅವರ ಹೇಳಿಕೆಯನ್ನು ದಾಖಲಿಸದೆ ಆರೋಪ ಸ್ಥಿರಪಡುವುದಿಲ್ಲವೆಂಬ ನೀಡಿರುವ ಅಭಿಪ್ರಾಯವನ್ನು ಸರ್ಕಾರವು ಒಪ್ಪದೆ ಅವರ ಮೇಲಿನ ಈ ಆಪಾದನೆ ರುಜುವಾತಾಗುತ್ತದೆಂದು ನಿರ್ಣಯಿಸಿದೆ.

ಆಪಾದಿತರು 2ನೇ ಕಾರಣ ಕೇಳುವ ನೋಟೀಸ್‌ಗೆ ನೀಡಿರುವ ಉತ್ತರಗಳನ್ನು ಪರಿಶೀಲಿಸಲಾಗಿ, ಅವುಗಳು ಸಮಂಜಸವೆಂದು ಕಂಡುಬರುವುದಿಲ್ಲವಾದ್ದರಿಂದ ಹಾಗೂ ಅವರು ತಮ್ಮ ಹೇಳಿಕೆಯನ್ನು ಸಮರ್ಥಿಸಿಕೊಳ್ಳಲು ಯಾವುದೇ ಆಧಾರಗಳನ್ನು ಒದಗಿಸದೆ ಇರುವುದರಿಂದ ಅವರುಗಳ ಮೇಲೆ ಮಾಡಲಾದ ಆರೋಪಗಳು ರುಜುವಾತಾಗುತ್ತದೆಂದು ಶಿಸ್ತು ಪ್ರಾಧಿಕಾರವಾದ ಸರ್ಕಾರವು ನಿರ್ಣಯಿಸಿ, ಅವರಿಗೆ ಸೂಕ್ತ ದಂಡನೆ ವಿಧಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 33 ಇಎನ್‌ಕ್ಯೂ 03, ಬೆಂಗಳೂರು, ದಿನಾಂಕ: 2ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ. ರಾಮಪ್ಪ, ಅಂದಿನ ಕಿರಿಯ ಇಂಜಿನಿಯರ್, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಾರ್ಯಾಲಯ ಹಿರೇಕೆರೂರು ಹಾಲಿ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಅಧೀಕ್ಷಕ ಅಭಿಯಂತರರ ಕಛೇರಿ, ಲೋಕೋಪಯೋಗಿ ವೃತ್ತ, ಮಂಗಳೂರು ಇವರು ಹಿರೇಕೆರೂರು ತಾಲ್ಲೂಕಿನಲ್ಲಿ ವಿವಿಧ ವಸತಿ ಯೋಜನೆಗಳಡಿಯಲ್ಲಿ ಸರ್ಕಾರಿ ಹಣವನ್ನು ದುರುಪಯೋಗಪಡಿಸಿಕೊಂಡಿರುವರೆಂಬ ಸಾಬೀತಾದ ಆಪಾದನೆಗಳಿಗಾಗಿ ಅವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಮೊತ್ತ ರೂ. 5,01,637.00 (ಐದು ಲಕ್ಷ ಒಂದು ಸಾವಿರದ ಆರುನೂರ ಮೂವತ್ತೇಳು ಮಾತ್ರ) ಗಳನ್ನು ಅವರ ವೇತನದಿಂದ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iv) ರಂತೆ ವಸೂಲು ಮಾಡಲು ಹಾಗೂ ನಿಯಮ 8(iii) ರಂತೆ ಅವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆ ಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 605

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎ. ಇಕ್ಬಾಲ್ ಅಹಮದ್, ಉಪ ನಿರ್ದೇಶಕರು (ನಿವೃತ್ತಿ) ಹಿಂದಿನ ನಿರ್ದೇಶಕರು, ಸರ್ಕಾರಿ ಕೇಂದ್ರಿಯ ಕಾರ್ಯಾಗಾರ, ಮಡಿಕೇರಿ, ಇವರಿಂದ ಬಾಕಿ ಇದ್ದ ರೂ. 22,999.00 ಗಳನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ:** ಕೈಗಾರಿಕಾಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಪತ್ರ ಸಂಖ್ಯೆ: ಜಿಕೈಕೇ/ಜಿನಿಡಬ್ಲ್ಯೂ/ಮಡಿಕೇರಿ/2002-03, ದಿನಾಂಕ: 5.7.2003.

**ಪ್ರಸ್ತಾವನೆ:**

ಶ್ರೀ ಎ. ಇಕ್ಬಾಲ್ ಅಹಮದ್, ಉಪ ನಿರ್ದೇಶಕರು (ನಿವೃತ್ತ) ಇವರು ಹಿಂದೆ ಸರ್ಕಾರಿ ಕೇಂದ್ರಿಯ ಕಾರ್ಯಾಗಾರ ಮಡಿಕೇರಿ, ಇಲ್ಲಿ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ರೂ. 22,999.00 ಗಳನ್ನು ಅಕ್ರಮವಾಗಿ ಜೀಪ್ ಬಾಡಿ ರಚನೆಗೆ ಮಾಡಿದ ವೆಚ್ಚವನ್ನು ಅಧಿಕಾರಿಯ ನಿವೃತ್ತಿ ವೇತನದಲ್ಲಿ ಕಡಿತಗೊಳಿಸಲಾಗಿತ್ತು. ನಂತರ ಸದರಿ ನಿವೃತ್ತ ಅಧಿಕಾರಿಯು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಸಲ್ಲಿಸಿದ್ದ ಅರ್ಜಿ ಸಂಖ್ಯೆ: 9027/2001 ರ ಮೇಲೆ ಮಾನ್ಯ ನ್ಯಾಯಮಂಡಳಿಯು ದಿನಾಂಕ: 13.2.2002 ರಂದು ನೀಡಿರುವ ತೀರ್ಪಿನನ್ವಯ ಈ ಅಧಿಕಾರಿಗೆ ಮೊತ್ತವನ್ನು ಮರುಪಾವತಿಸಲಾಗಿತ್ತು. ಈ ಮೊತ್ತವನ್ನು ಸಂಸ್ಥೆಯ ಲೆಕ್ಕದಿಂದ ತೆಗೆದುಹಾಕಲು ಮಹಾಲೇಖಪಾಲರು 2001-02ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಲ್ಲಿ ಶಿಫಾರಸ್ಸು ಮಾಡಿದ್ದಾರೆಂದು ತಿಳಿಸಿರುವುದರಿಂದ ಮೊತ್ತವನ್ನು ತೆಗೆದುಹಾಕಲು ಮೇಲೆ ಓದಲಾದ ದಿನಾಂಕ: 5.7.2003 ರ ಪತ್ರದಲ್ಲಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಕೋರಿದ್ದರು.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 122 ಕೈಸೇವಿ 2003, ಬೆಂಗಳೂರು, ದಿನಾಂಕ: 31ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಶ್ರೀ ಎ. ಇಕ್ಬಾಲ್ ಅಹಮದ್, ಉಪ ನಿರ್ದೇಶಕರು, ಹಿಂದಿನ ನಿರ್ದೇಶಕರು, ಸರ್ಕಾರಿ ಕೇಂದ್ರಿಯ ಕಾರ್ಯಾಗಾರ, ಇವರು ಅಕ್ರಮ ಜೀಪ್ ಬಾಡಿ ರಚನೆಗೆ ವ್ಯಯ ಮಾಡಿದ್ದ ರೂ. 22,999.00 (ರೂಪಾಯಿ ಇಪ್ಪತ್ತೆರಡು ಸಾವಿರದ ಒಂಬೈನೂರ ತೊಂಬತ್ತೊಂಬತ್ತು ಮಾತ್ರ) ಗಳನ್ನು ಸಂಸ್ಥೆಯ ಲೆಕ್ಕದಿಂದ ತೆಗೆದುಹಾಕಲು (ಮನ್ನಾ ಮಾಡಲು) ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಅಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 606

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕೈಗಾರಿಕಾ ಸೇವೆಗಳು).

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಪಿ.ಟಿ. ನಾರಾಯಣಪುರ್, ಹಿಂದಿನ ಉಪ ತಹಶೀಲ್ದಾರ್, ನಾಡ ಕಛೇರಿ, ಬೆಟಗೇರಿ, ಇವರು ಸಿಸಿಎ ನಿಯಮಾವಳಿ ನಿಯಮ 18 ರಡಿಯಲ್ಲಿ ಸಲ್ಲಿಸಿರುವ ಮೇಲ್ಮನವಿ ಬಗ್ಗೆ.

**ಓದಲಾಗಿದೆ:** 1) ಗದಗ ಜಿಲ್ಲಾಧಿಕಾರಿಯವರ ನಡವಳಿಯ ಸಂಖ್ಯೆ: ಸಿಬ್ಬಂದಿ-1: ವಹಿ:75:2003-2004, ದಿನಾಂಕ: 10.3.2003.

2) ಶ್ರೀ ಪಿ.ಟಿ. ನಾರಾಯಣಪುರ್, ಶಿರಸ್ತೇದಾರ್, ತಹಶೀಲ್ದಾರ್ ಕಛೇರಿ ಗದಗ, ಇವರ ಮೇಲ್ಮನವಿ, ದಿನಾಂಕ: 30.6.2003.

**ಪ್ರಸ್ತಾವನೆ:**

ಶ್ರೀ ಪಿ.ಟಿ. ನಾರಾಯಣಪುರ್, ಇವರು ಈ ಹಿಂದೆ ಉಪ ತಹಶೀಲ್ದಾರ್, ನಾಡಕಛೇರಿ, ಬೆಟಗೇರಿ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀಮತಿ ರತ್ನಾಬಾಯಿ ಕೋಂ ಈಶ್ವರ್‌ಸಾಮೇರವಾಡಿ, ಇವರಿಗೆ ವಿಧವಾವೇತನ ಮಂಜೂರು ಮಾಡಲು ಆದ ವಿಳಂಬದ ಬಗ್ಗೆ ಸದರಿಯವರು ದೂರು ಅರ್ಜಿ ಸಲ್ಲಿಸಿದಾಗ ಸದರಿ ದೂರನ್ನು ಪರಿಶೀಲನೆಯ ಬಳಿಕ ಶ್ರೀಮತಿ ರತ್ನಾಬಾಯಿ ಇವರಿಗೆ ವಿಧವಾವೇತನ ಮಂಜೂರು ಮಾಡುವಲ್ಲಿ ಅತಿಯಾಗಿ ವಿಳಂಬ ನೀತಿ ಅನುಸರಿಸಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವ ಹಿನ್ನೆಲೆಯಲ್ಲಿ ಶ್ರೀ ಪಿ.ಟಿ. ನಾರಾಯಣಪುರ್, ಶಿರಸ್ತೇದಾರ್, ಶ್ರೀ ಜೆ.ಬಿ. ಚಿಕ್ಕನಗೌಡರ್, ಗ್ರಾಮ ಲೆಕ್ಕಿಗ ಹಾಗೂ ಶ್ರೀಮತಿ ಬಿ.ಎಸ್. ಗಿರಿಭಟ್ಟನವರ್, ದ್ವಿ.ದ.ಸ. ಇವರುಗಳನ್ನು ಇಲಾಖಾ ವಿಚಾರಣೆಗೆ ಒಳಪಡಿಸಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿಯವರು ನೀಡಿರುವ ಲಿಖಿತ ವಿವರಣೆಗಳು ಅಸಮಂಜಸವಾಗಿರುವುದಾಗಿ ಅವುಗಳನ್ನು ಒಪ್ಪತಕ್ಕದಲ್ಲವೆಂದು ನಿರ್ಧರಿಸಿ ಸಿಸಿಎ ನಿಯಮಾವಳಿ ನಿಯಮ 12 ರಡಿಯಲ್ಲಿ ವಿಚಾರಣೆ ಕೈಗೊಳ್ಳಲು ನಿರ್ಧರಿಸಿ ತತ್ಪರಿಣಾಮವಾಗಿ ಸದರಿ ನೌಕರರುಗಳು ಎಸಗಿದ ಅಲಕ್ಷ್ಯ ಹಾಗೂ ಕರ್ತವ್ಯ ಲೋಪ ಎದ್ದು ಕಾಣುತ್ತಿರುವ ಹಿನ್ನೆಲೆಯಲ್ಲಿ ಅವರು ಎಸಗಿದ ದುರ್ನಡತೆ ಸಾಬೀತಾಗಿದೆ ಎಂದು ಸದರಿಯವರಿಗೆ ಜಿಲ್ಲಾಧಿಕಾರಿಗಳು, ಗದಗ, ಇವರು ಶ್ರೀ ಪಿ.ಟಿ. ನಾರಾಯಣಪುರ್ ಶಿರಸ್ತೇದಾರ್ ಮತ್ತು ಶ್ರೀ ಜೆ.ಬಿ. ಚಿಕ್ಕನಗೌಡರ್, ಗ್ರಾಮಲೆಕ್ಕಿಗ ಇವರಿಗೆ ಸಿಸಿಎ ನಿಯಮಾವಳಿ ನಿಯಮ 8(iii) ರಂತೆ ಅವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಇಲ್ಲದಂತೆ 6 ತಿಂಗಳವರೆಗೆ ಮತ್ತು ಶ್ರೀಮತಿ ಬಿ.ಎಸ್. ಗಿರಿಭಟ್ಟನವರ್, ದ್ವಿ.ದ.ಸ. ಇವರ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಇಲ್ಲದಂತೆ ಒಂದು ವರ್ಷದವರೆಗೆ ತಡೆಹಿಡಿದು ದಂಡನೆ ವಿಧಿಸಿರುತ್ತಾರೆ.

ಮೇಲೆ ಓದಲಾದ ಗದಗ ಜಿಲ್ಲಾಧಿಕಾರಿಗಳ ಆದೇಶವನ್ನು ಶ್ರೀ ಪಿ.ಟಿ. ನಾರಾಯಣಪುರ್, ಶಿರಸ್ತೇದಾರ್, ಇವರು ಈ ಕೆಳಕಾಣಿಸಿದ ಕಾರಣಗಳ ಹಿನ್ನೆಲೆಯಲ್ಲಿ ಪ್ರಶ್ನಿಸಿ ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿರುತ್ತಾರೆ.

1. ಶಿಸ್ತು ಪ್ರಾಧಿಕಾರಿಗಳು ದಂಡನೆ ವಿಧಿಸುವ ಪೂರ್ವದಲ್ಲಿ ವಿಚಾರಣೆ ನಡೆಸಿಲ್ಲ ಹಾಗೂ ಇದರಿಂದಾಗಿ ತನಗೆ ಹೇಳಿಕೆಯನ್ನು ಸಲ್ಲಿಸಲು ಅವಕಾಶ ಒದಗಿಸಲಿಲ್ಲ;
2. ವಿಚಾರಣೆ ಆದೇಶಿಸುವ ಮೊದಲು ನಿಯಮಗಳ ಪ್ರಕಾರ ಆರೋಪಣಾ ಪಟ್ಟಿಯನ್ನು ಜಾರಿಗೊಳಿಸಿಲ್ಲ;
3. ಮೇಲ್ಮನವಿದಾರರು ಕಾರಣ ಕೇಳುವ ನೋಟೀಸಿಗೆ ನೀಡಿದ ಲಿಖಿತ ಹೇಳಿಕೆ ಸರಿಯಾಗಿ ಪರಿಶೀಲನೆ ಮಾಡಿಲ್ಲದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಗಳು ವಿಧಿಸಿದ ದಂಡನೆ ನ್ಯಾಯ ಸಮ್ಮತವಾಗಿರುವುದಿಲ್ಲ.

ಈ ಕಾರಣಗಳ ಹಿನ್ನೆಲೆಯಲ್ಲಿ ಗದಗ ಜಿಲ್ಲಾಧಿಕಾರಿಗಳು ವಿಧಿಸಿದ ದಂಡನೆಯು ನ್ಯಾಯಸಮ್ಮತವಲ್ಲವೆಂದು ನಿರ್ಧರಿಸಿ ವಜಾ ಮಾಡಲು ಕೋರಿರುತ್ತಾರೆ.

ಸದರಿ ಮೇಲ್ಮನವಿಯನ್ನು ದಿನಾಂಕ: 31.5.2004 ರಂದು ವಿಚಾರಣೆಗಾಗಿ ಕೈಗೆತ್ತಿಕೊಂಡು ಮೇಲ್ಮನವಿದಾರರಿಗೆ ತನ್ನ ಹೇಳಿಕೆಯನ್ನು ನೀಡಲು ಮುಕ್ತ ಅವಕಾಶವನ್ನು ನೀಡಲಾಯಿತು. ಮೇಲ್ಮನವಿದಾರರು ನ್ಯಾಯಾಲಯದಲ್ಲಿ ಹಾಜರಾಗಿ ತಾನು ಬೆಟಗೇರಿ ನಾಡ ಕಛೇರಿಯ ಉಪ ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀಮತಿ ರತ್ನಾಬಾಯಿ ಮೇರವಾಡೆ ಇವರಿಗೆ ವಿಧವಾವೇತನ ಮಂಜೂರು ಮಾಡುವ ಕುರಿತು ಸಂಬಂಧಪಟ್ಟ ಅರ್ಜಿಯನ್ನು ಸ್ಥಾನಿಕ ಚೌಕಾಶಿಗಾಗಿ ದಿನಾಂಕ: 30.11.2001 ರಂದು ರವಾನಿಸಲಾಗಿ ಕಂದಾಯ ನಿರೀಕ್ಷಕರವರಿಂದ ಅವರ ವರದಿಯೊಂದಿಗೆ ಪ್ರಕರಣ ದಿನಾಂಕ: 1.5.2002 ರಂದು ನಾಡ ಕಛೇರಿಗೆ ಬಂದಿದ್ದು ಅಂದೇ ಅಂದರೆ ದಿನಾಂಕ: 1.5.2002 ರಂದೇ ವಿಧವಾವೇತನ ಮಂಜೂರು ಮಾಡಿರುವುದಾಗಿ ತಿಳಿಸಿ ಅದರ ಪ್ರತಿ ಫಲಾನುಭವಿಗೆ ಕಳುಹಿಸಲು ವಿಷಯ ನಿರ್ವಾಹಕರ ಹಂತದಲ್ಲಿ ವಿಳಂಬವಾಗಿರುವುದರಿಂದ ಈ ವಿಳಂಬದ ಬಗ್ಗೆ ತಾನು ನೇರವಾಗಿ ಜವಾಬ್ದಾರರಾಗುವುದಿಲ್ಲವೆಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಮನವಿದಾರರು ನೀಡಿದ ಹೇಳಿಕೆ, ಈ ಪ್ರಕರಣಕ್ಕೆ ಸಂಬಂಧಪಟ್ಟ ಮೂಲ ದಸ್ತಾವೇಜು ಹಾಗೂ ಜಿಲ್ಲಾಧಿಕಾರಿಗಳು ಒದಗಿಸಿದ ಕಂಡಿಕೆವಾರು ಷರಾಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಪ್ರಕರಣವನ್ನು ಆದೇಶಕ್ಕಾಗಿ ಕಾಯ್ದಿರಿಸಲಾಗಿತ್ತು.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 293 ಬಿಎಂಎಂ 2003, ಬೆಂಗಳೂರು, ದಿನಾಂಕ: 4ನೇ ಜೂನ್ 2004**

ಶ್ರೀ ಲುಕೋಸ್ ವಲ್ಲತರೈ, ಐಎಎಸ್, ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ, ಆದ ನಾನು, ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಬೆಟಗೇರಿ ನಾಡ ಕಛೇರಿಯಲ್ಲಿ ಸಾರ್ವಜನಿಕರಿಂದ ಬಂದ ಯಾವುದೇ ಮನವಿಗಳಿಗೆ ತೀರ್ಮಾನ ಕೈಗೊಳ್ಳುವ ಸಂಪೂರ್ಣ ಅಧಿಕಾರ ಹಾಗೂ ಬೆಟಗೇರಿ ನಾಡಕಛೇರಿಯ ಅಧೀನದಲ್ಲಿ ಕಾರ್ಯನಿರ್ವಹಿಸುವ ಸಿಬ್ಬಂದಿಗಳ ನಿಯಂತ್ರಣವು ಆ ಕಛೇರಿಯ ಮುಖ್ಯಸ್ಥರ ಅಧಿಕಾರ ವ್ಯಾಪ್ತಿಯಲ್ಲಿ ಒಳಪಡುವುದರಿಂದ ಆ ಕಛೇರಿಯ ಕಂದಾಯ ನಿರೀಕ್ಷಕರ ಬಳಿ ಹಾಗೂ ವಿಷಯ ನಿರ್ವಾಹಕರ ಬಳಿ ಆದ ವಿಳಂಬದ ಬಗ್ಗೆ ಕಛೇರಿಯ ಮುಖ್ಯಸ್ಥರಾದ ಮೇಲ್ಮನವಿದಾರರು ಯಾವುದೇ ಕ್ರಮ ಕೈಗೊಳ್ಳದೆ ಕರ್ತವ್ಯ ನಿರ್ವಹಿಸುವಲ್ಲಿ ವಿಫಲರಾಗಿದ್ದು ಕಂಡುಬಂದಿರುವ ಹಿನ್ನೆಲೆಯಲ್ಲಿ ಗದಗ ಜಿಲ್ಲಾಧಿಕಾರಿಗಳು ದಿನಾಂಕ: 10.3.2003 ರಂದು ಹೊರಡಿಸಿದ

ಆದೇಶ ನ್ಯಾಯಬದ್ಧವಾಗಿರುವುದರಿಂದ ಸದರಿ ಆದೇಶವನ್ನು ಮಾರ್ಪಡಿಸಲು ಯಾವುದೇ ಕಾರಣಗಳು ಇರುವುದಿಲ್ಲವೆಂದು ಮನಗಂಡು ಮೇಲ್ಮನವಿದಾರರ ಹೇಳಿಕೆಯನ್ನು ತಳ್ಳಿಹಾಕಿ ಸದರಿಯವರ ಮೇಲ್ಮನವಿಯನ್ನು ತಿರಸ್ಕರಿಸಿ ಆದೇಶಿಸಿದ್ದೇನೆ.

ಈ ಆದೇಶವನ್ನು ಉಕ್ತಲೇಖಿಸಿ, ಬೆರಳಚ್ಚುಮಾಡಿಸಿ ದಿನಾಂಕ: 4.6.2004 ರಂದು ನ್ಯಾಯಾಲಯದಲ್ಲಿ ಜಾಹೀರುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 610

**ಲುಕೋಸ್ ವಲ್ಲತರೈ**

ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ.

**ವಿಷಯ:** ಶ್ರೀ ಕೆ.ಎಸ್. ಗೋಪಾಲಶಾಸ್ತ್ರಿ, ಆರ್.ಆರ್. ಶಿರಸ್ತೇದಾರ್ ಕನಕಪುರ ತಾಲ್ಲೂಕು ಕಛೇರಿ ಇವರು ನಿಯಮ 18(3) ರಲ್ಲಿ ಸಲ್ಲಿಸಿರುವ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1) ತುಮಕೂರು ಜಿಲ್ಲಾಧಿಕಾರಿಯವರ ನಡವಳಿ ಸಂಖ್ಯೆ: ಸಿಬ್ಬಂದಿ ಸಿಸಿಎ 648:80-81, ದಿನಾಂಕ: 31.7.1995.
2) ಶ್ರೀ ಕೆ.ಎಸ್. ಗೋಪಾಲಶಾಸ್ತ್ರಿ ಶಿರಸ್ತೇದಾರ್ ಇವರು ದಿನಾಂಕ: 26.12.1995 ರಂದು ಸಲ್ಲಿಸಿದ ಮೇಲ್ಮನವಿ.
3) ಬೆಂಗಳೂರು ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ: ಜಿಅ(ನ):ಕೆಎಟಿ:8:03-04, ದಿನಾಂಕ: 3.11.2003.
4) ಸರ್ಕಾರದ ನೋಟೀಸು ಸಂಖ್ಯೆ: ಕಂಇ 180:ಬಿಎಂಎಂ: 2004, ದಿನಾಂಕ: 12.5.2004.

**ಪ್ರಸ್ತಾವನೆ:**

ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕು ತಹಶೀಲ್ದಾರರವರ ಕಛೇರಿಯಲ್ಲಿ ಅನಧಿಕೃತ ಸಾಗುವಳಿ ಜಮೀನನ್ನು ಸಕ್ರಮಗೊಳಿಸುವ ಪ್ರಕರಣಗಳಲ್ಲಿ ನಿಯಮಬಾಹಿರ ಕ್ರಮ ಕೈಗೊಂಡು ಕರ್ತವ್ಯ ಲೋಪ ಎಸಗಿರುವಂತಹ ನೌಕರರನ್ನು ಇಲಾಖಾ ವಿಚಾರಣೆಗೆ ಒಳಪಡಿಸಲು ಹಿಂದಿನ ಬೆಂಗಳೂರು ವಿಭಾಗಾಧಿಕಾರಿಗಳು ಅವರ ಕಛೇರಿಯ ಸಂಖ್ಯೆ: ಸಿಸಿಎ:73:87-88 ದಿನಾಂಕ: 12.4.91ರ ಪತ್ರದಲ್ಲಿ ತುಮಕೂರು ಜಿಲ್ಲಾಧಿಕಾರಿಗಳಿಗೆ ಸೂಚಿಸಿದ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲಾಧಿಕಾರಿಗಳು ಸಿಸಿಎ ನಿಯಮಗಳಡಿಯಲ್ಲಿ ಒಟ್ಟು 27 ವಿವಿಧ ನೌಕರರ ಮೇಲೆ ಇಲಾಖಾ ವಿಚಾರಣೆ ಕೈಗೊಂಡು ಆರೋಪಣೆ ಸಾಬೀತಾಗಿರುವ ನೌಕರರಿಗೆ ಮೇಲೆ ಓದಲಾದ (1)ರ ಆದೇಶದಲ್ಲಿ ದಂಡನೆ ವಿಧಿಸಿರುತ್ತಾರೆ. ದಂಡನೆಗೆ ಒಳಗಾದ ನೌಕರರುಗಳಲ್ಲಿ ಶ್ರೀ ಗೋಪಾಲಶಾಸ್ತ್ರಿ ಇವರು ಒಬ್ಬರಾಗಿದ್ದು ಇವರಿಗೆ 4 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಿಲ್ಲದೆ ದಂಡನೆ ವಿಧಿಸಿರುತ್ತಾರೆ.

ಓದಲಾದ ಕ್ರಮ ಸಂಖ್ಯೆ (2) ರಂತೆ ಸದರಿ ಆದೇಶವನ್ನು ಪ್ರಶ್ನಿಸಿ ಶ್ರೀ ಗೋಪಾಲಶಾಸ್ತ್ರಿ ಇವರ ಮೇಲೆ ಹಿಂದಿನ ಬೆಂಗಳೂರು ವಿಭಾಗಾಧಿಕಾರಿಗಳಿಗೆ ಮೇಲ್ಮನವಿ ಸಲ್ಲಿಸಿರುತ್ತಾರೆ. ಸದರಿ ಮೇಲ್ಮನವಿಯಲ್ಲಿ ಈ ಕೆಳಗಿನಂತೆ ವಾದವನ್ನು ಮಂಡಿಸಿರುತ್ತಾರೆ.

ಅ) ಸದರಿಯವರಿಗೆ ದಂಡನೆ ವಿಧಿಸುವಾಗ ವಿಚಾರಣಾಧಿಕಾರಿಗಳು ತಾಳಿದ ನಿಲುವನ್ನು ಪರಿಗಣನೆಗೆ ತೆಗೆದುಕೊಂಡಿರುವುದಿಲ್ಲ.

ಆ) ಒಂದೇ ಆಪಾದನೆ ಮೇಲೆ ಒಟ್ಟು 36 ನೌಕರರನ್ನು ಇಲಾಖಾ ವಿಚಾರಣೆಗೆ ಒಳಪಡಿಸಿ ಕೇವಲ 9 ಜನರಿಗೆ ಜವಾಬ್ದಾರರನಾಗಿ ಮಾಡಿ ದಂಡನೆ ವಿಧಿಸಿದ್ದು ನ್ಯಾಯಸಮ್ಮತವಾದ ಕ್ರಮವಲ್ಲ.

ಇ) ಮೇಲ್ಮನವಿದಾರರು ಯಾವುದೇ ತಪ್ಪು ಮಾಡದೇ ಇದ್ದಾಗ್ಯೂ ಶಿಸ್ತು ಪ್ರಾಧಿಕಾರಿಗಳು ದಂಡನೆ ವಿಧಿಸಿರುವುದರಿಂದ ಅವರು ನೈಸರ್ಗಿಕ ನ್ಯಾಯ ತತ್ವವನ್ನು ಪಾಲಿಸಿಲ್ಲ.

ದಿನಾಂಕ: 1.4.2003 ರಿಂದ ವಿಭಾಗಾಧಿಕಾರಿಗಳ ಕಛೇರಿಗಳು ರದ್ದಾಗಿರುವ ಹಿನ್ನೆಲೆಯಲ್ಲಿ ಓದಲಾದ ಕ್ರಮ ಸಂಖ್ಯೆ (3) ರಂತೆ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಈ ಮೇಲ್ಮನವಿಯನ್ನು ಪರಿಶೀಲಿಸಲು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಓದಲಾದ ಕ್ರಮ ಸಂಖ್ಯೆ (4) ರ ಪ್ರಕಾರ ದಿನಾಂಕ: 24.5.2004 ರಂದು ವಿಚಾರಣೆಗೆ ಹಾಜರಾಗಲು ಮೇಲ್ಮನವಿದಾರರಿಗೆ ನೋಟೀಸನ್ನು ಜಾರಿ ಮಾಡಿದ ಹಿನ್ನೆಲೆಯಲ್ಲಿ ಮೇಲ್ಮನವಿದಾರರು ನ್ಯಾಯಾಲಯದಲ್ಲಿ ಅಂದು ಹಾಜರಿದ್ದರು. ಮೇಲ್ಮನವಿಯಲ್ಲಿ ಎತ್ತಿರುವ ಅಂಶಗಳನ್ನು ಎತ್ತಿ ಹಿಡಿದು ತಾನು ಯಾವುದೇ ತಪ್ಪು ಮಾಡಿಲ್ಲವೆಂದು ಹಾಗೂ ಘಟನೆ ನಡೆದ ವೇಳೆಯಲ್ಲಿ ತಾನು ಸೇವೆಗೆ ಸೇರಿ ಕೇವಲ ಒಂದೂವರೆ ತಿಂಗಳು ಆಗಿದ್ದರಿಂದ ಸದರಿ ತಪ್ಪನ್ನು ತೀವ್ರವಾಗಿ ಪರಿಗಣಿಸದೆ ಶಿಸ್ತು ಪ್ರಾಧಿಕಾರಿಗಳು ವಿಧಿಸಿದ ದಂಡನೆಯನ್ನು ವಜಾಗೊಳಿಸಲು ವಿನಂತಿಸಿಕೊಂಡಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಸ್ತಾವೇಜುಗಳನ್ನು ಪರಿಶೀಲಿಸಲಾಗಿದೆ ಹಾಗೂ ಮೇಲ್ಮನವಿದಾರರ ಹೇಳಿಕೆಯನ್ನು ಪರಿಗಣಿಸಲಾಗಿದೆ. ಮೇಲ್ಮನವಿದಾರರು ಘಟನೆ ನಡೆದ ವೇಳೆಯಲ್ಲಿ ತಾನು ಸೇವೆಗೆ ಸೇರಿ ಕೇವಲ ಒಂದೂವರೆ ತಿಂಗಳು ಆಗಿದೆ ಎಂದು ನೀಡಿದ ಹೇಳಿಕೆಯನ್ನು ಒಂದು ವೇಳೆ ಒಪ್ಪಿದ್ದರೂ ಸಹ ಈ ಅಂಶವನ್ನೇ ಶಿಸ್ತುಪ್ರಾಧಿಕಾರಿಗಳು ಪರಿಗಣಿಸಿ ಇವರಿಗೆ ಲಘು ದಂಡನೆ ವಿಧಿಸಿರುವ ಅಂಶ ಸ್ಪಷ್ಟವಾಗಿರುತ್ತದೆ. ಆದ್ದರಿಂದ ಅದೇ ವಾದವನ್ನು ಮತ್ತೆ ಮೇಲ್ಮನವಿಯಲ್ಲಿ ಆಧಾರವಾಗಿ ಉಪಯೋಗಿಸಲು ಸಾಧ್ಯವಿಲ್ಲವೆಂದು ಮೇಲ್ಮನವಿದಾರರ ಈ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲವೆಂದು ನಿರ್ಧರಿಸಿ ಈ ಕೆಳಕಂಡ ಆದೇಶವನ್ನು ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 108 ಬಿಎಂಎಂ 2004, ಬೆಂಗಳೂರು, ದಿನಾಂಕ: 29ನೇ ಮೇ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲುಕೋಸ್ ವಲ್ಲತರೈ, ಐಎಎಸ್, ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಆದ ನಾನು ಪ್ರಕರಣವನ್ನು ಕೂಲಂಕಷವಾಗಿ ಪರಾಂಭರಿಸಿ ದಿನಾಂಕ: 31.7.95 ರಂದು ತುಮಕೂರು ಜಿಲ್ಲಾಧಿಕಾರಿಗಳು ಮಾಡಿದ ಆದೇಶ ಯುಕ್ತ ಹಾಗೂ ನ್ಯಾಯಬದ್ಧವಾದುದರಿಂದ ಈ ಆದೇಶವನ್ನು ಅಲ್ಲಗಳೆಯಲು ಯಾವುದೇ ಕಾರಣಗಳು ಕಂಡುಬರುತ್ತಿಲ್ಲ. ಆದುದರಿಂದ ಶ್ರೀ ಕೆ.ಎಸ್. ಗೋಪಾಲಶಾಸ್ತ್ರಿ, ಹಿಂದಿನ ಕಂದಾಯ ನಿರೀಕ್ಷಕ ಇವರಿಗೆ ಜಿಲ್ಲಾಧಿಕಾರಿಗಳು ವಿಧಿಸಿದ ದಂಡನೆಯನ್ನು ಎತ್ತಿ ಹಿಡಿದು ಸದರಿಯವರ ಮೇಲ್ಮನವಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಆದೇಶವನ್ನು ಉಕ್ತಲೇಖಿಸಿ ಬೆರಳಚ್ಚು ಮಾಡಿಸಿ ದಿನಾಂಕ: 29.5.2004 ರಂದು ನ್ಯಾಯಾಲಯದಲ್ಲಿ ಜಾಹೀರುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 611

**ಲುಕೋಸ್ ವಲ್ಲತರೈ**

ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆಯಲ್ಲಿ, ಮಾನಸಿಕ ಆರೋಗ್ಯ ಕ್ರಿಯಾ ಯೋಜನೆಯ ಅಡಿಯಲ್ಲಿ ಮನೋರೋಗ ತಜ್ಞರ ಹುದ್ದೆಗಳನ್ನು ಸೃಜಿಸುವ ಕುರಿತು ಆದೇಶ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 790 ಆಯೋಸಂ 2003, ದಿನಾಂಕ: 4.12.2003.

2) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎನ್‌ಸಿಡಿಪಿ : 6 : 2000 - 2001, ದಿನಾಂಕ: 17.12.2003.

**ಪ್ರಸ್ತಾವನೆ:**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆಯಲ್ಲಿ, ಮಾನಸಿಕ ಆರೋಗ್ಯ ಕ್ರಿಯಾ ಯೋಜನೆಯ ಅಡಿಯಲ್ಲಿನ ಹುದ್ದೆಗಳ ಮಂಜೂರಾತಿಗೆ ಸಂಬಂಧಿಸಿದಂತೆ, ವೈದ್ಯಕೀಯ ಸಿಬ್ಬಂದಿಯ ನೇಮಕಾತಿಯನ್ನು ಹೊಸದಾಗಿ ಮಾಡತಕ್ಕದ್ದಲ್ಲ. ಹಾಲಿ ಇರುವ ಸಿಬ್ಬಂದಿಯನ್ನು ಮರು ನೇಮಕಾತಿ (ರಿ ಡಿಪ್ಲಾಯ್‌ಮೆಂಟ್) ಮೂಲಕ ಅಗತ್ಯ ಹುದ್ದೆಗಳನ್ನು ತುಂಬತಕ್ಕದ್ದು ಎಂದು ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಆದೇಶಿಸಲಾಗಿತ್ತು.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆಯಲ್ಲಿ, ಪ್ರಸ್ತುತ ಇರುವ ಮನೋರೋಗ ತಜ್ಞರು, ಕ್ಲಿನಿಕಲ್ ಸೈಕಾಲಜಿಸ್ಟ್, ಸೈಕ್ರಿಯಾಟ್ರಿಕ್ ಸೋಸಿಯಲ್ ವರ್ಕರ್ ಹುದ್ದೆಗಳು ಬಹಳ ವಿರಳವಾಗಿರುತ್ತವೆ. ಈ ಹುದ್ದೆಗಳಿಗೆ ಸಂಬಂಧಿಸಿದ ತಜ್ಞತೆ ಮತ್ತು ಅರ್ಹತೆ ಇರುವವರನ್ನು ನೇಮಕಾತಿ ಮಾಡಬೇಕಾಗಿರುವುದರಿಂದ ಬೇರೆಯವರನ್ನು ಮರು ನೇಮಕಾತಿ (ರಿ ಡಿಪ್ಲಾಯ್‌ಮೆಂಟ್) ಮಾಡಲು ಬರುವುದಿಲ್ಲ. ಹಾಗೂ ಈಗಾಗಲೇ 17 ಜಿಲ್ಲೆಗಳಲ್ಲಿ ಮನೋರೋಗ ತಜ್ಞರು ಕೆಲಸ ನಿರ್ವಹಿಸುತ್ತಿದ್ದು ಉಳಿದ 9 ಜಿಲ್ಲೆಗಳಲ್ಲಿ ಮನೋರೋಗ ತಜ್ಞರ ಹುದ್ದೆ ಖಾಲಿ ಇರುವುದರಿಂದ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಮನೋರೋಗ ತಜ್ಞರನ್ನು ಪಕ್ಕದ ಜಿಲ್ಲೆಗೆ ಕ್ಲಿನಿಕ್ ಹಾಗೂ ಕಾರ್ಯಕ್ರಮ ನೋಡಿಕೊಳ್ಳಲು ಸಮವರ್ತಿತ ಪ್ರಭಾರದ ಮೇಲೆ ನಿಯೋಜಿಸಲಾಗಿದ್ದು ಇದರಿಂದಾಗಿ ಮಾನಸಿಕ ಆರೋಗ್ಯ ಕಾರ್ಯಕ್ರಮವನ್ನು ಸಮರ್ಪಕವಾಗಿ ಅನುಷ್ಟಾನಗೊಳಿಸಲು ಸಾಧ್ಯವಿಲ್ಲವೆಂದೂ ತಿಳಿಸಿ, ಸದರಿ ಹುದ್ದೆಗಳನ್ನು ಹೊಸದಾಗಿ ನೇಮಕಾತಿ ಮಾಡುವ ಅವಶ್ಯಕತೆ ಇರುವುದರಿಂದ ಹೊಸದಾಗಿ ನೇಮಕ ಮಾಡುವ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಮೇಲೆ (2) ರಲ್ಲಿ ಓದಲಾದ ಪತ್ರದ ಮೂಲಕ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಅಗತ್ಯವಿರುವ 32 ಮನೋರೋಗ ತಜ್ಞರ ಹುದ್ದೆಗಳ ಪೈಕಿ 27 DMHPS ಹುದ್ದೆಗಳನ್ನು ರೀ ಡಿಪ್ಲಾಯ್‌ಮೆಂಟ್ ಮೂಲಕ ಭರ್ತಿ ಮಾಡಲು ಹಾಗೂ ಕೊಪ್ಪಳ, ಹಾವೇರಿ, ಚಾಮರಾಜನಗರ, ಬಾಗಲಕೋಟೆ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ವೇತನ ಶ್ರೇಣಿ ರೂ. 7400-13120 ರಲ್ಲಿ 5 ಮನೋರೋಗ ತಜ್ಞರ ಹುದ್ದೆಗಳನ್ನು ಸೃಜಿಸಲು ತೀರ್ಮಾನಿಸಲಾಗಿದೆ. ಆದ್ದರಿಂದ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ: ಆಕುಕ 5 ಐಎಂಇ 2004, ಬೆಂಗಳೂರು, ದಿನಾಂಕ: 4ನೇ ಜೂನ್ 2004

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆಯಲ್ಲಿ, ಮಾನಸಿಕ ಆರೋಗ್ಯ ಕ್ರಿಯಾ ಯೋಜನೆಯ ಅಡಿಯಲ್ಲಿ ಹೊಸ ಜಿಲ್ಲೆಗಳಾದ ಕೊಪ್ಪಳ, ಹಾವೇರಿ, ಚಾಮರಾಜನಗರ, ಬಾಗಲಕೋಟೆ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಿಗೆ ಸಂಬಂಧಿಸಿದಂತೆ 5 ಮನೋರೋಗ ತಜ್ಞರ ಹುದ್ದೆಗಳನ್ನು ವೇತನ ಶ್ರೇಣಿ ರೂ. 7400-13120 ರಲ್ಲಿ ಸೃಜಿಸಲಾಗಿದೆ. ಈ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಕರ್ನಾಟಕ ಲೋಕ ಸೇವಾ ಆಯೋಗದಿಂದ ಭರ್ತಿ ಮಾಡತಕ್ಕದ್ದು.

ಈ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ನಡವಳಿ ಸಂಖ್ಯೆ: ಎಫ್‌ಡಿ : 633 : ವೆಚ್ಚ-5:2004, ದಿನಾಂಕ: 27.4.2004 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 612

**ಚೋಮಾನಾಯಕ್. ಜಿ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಅಪರ ನಿರ್ದೇಶಕರ (ಸಿ.ಎಂ.ಡಿ) ಈ ಹುದ್ದೆಯ ಪದನಾಮವನ್ನು ಯೋಜನಾ ನಿರ್ದೇಶಕರು (ಐ.ಡಿ.ಎಸ್) ಎಂದು ಪುನರ್ ಪದನಾಮೀಕರಣ ಕುರಿತು.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಎಡಿ : ಸಿಎಂಒ: 9: ಎಸ್‌ಎಲ್‌ಸಿಸಿ:2003-04, ದಿನಾಂಕ: 3.3.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ದಿನಾಂಕ: 19.2.2004 ರಂದು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ 9ನೇ ರಾಜ್ಯ

ಮಟ್ಟದ ಕೋಆರ್ಡಿನೇಷನ್ ಕಮಿಟಿಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ "ಅಪರ ನಿರ್ದೇಶಕರು (ಸಿಎಂಡಿ)" ಈ ಹುದ್ದೆಯ ಪದನಾಮವನ್ನು "ಯೋಜನಾ ನಿರ್ದೇಶಕರು (ಐ.ಡಿ.ಎಸ್)" ಎಂದು ಪುನರ್ ಪದನಾಮಿಕರಣ ಕುರಿತು ಈ ಕೆಳಕಂಡಂತೆ ತೀರ್ಮಾನ ತೆಗೆದುಕೊಳ್ಳಲಾಗಿದೆ ಎಂದು ಸರ್ಕಾರಕ್ಕೆ ವರದಿ ಮಾಡುತ್ತಾ, ಅಪರ ನಿರ್ದೇಶಕರು (ಸಿ.ಎಂ.ಡಿ.) ಈ ಹುದ್ದೆಯ ಪದನಾಮವನ್ನು ಬದಲಾಯಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

The Additional Director (CMD) is monitoring communicable as well as non-communicable diseases in the State. The IDSP Project is highlighting the surveillance activities of communicable and non-communicable diseases. The designation of the Additional Director (CMD) is little confusing. Therefore, the commissioner suggested that designation of the State Nodal Officer of IDSP should be on par with the Project Director (RCH) i.e., The Project Director (IDS), Integrated Disease Surveillance. The suggestion was very much appreciated and accepted by the committee.

ಸರ್ಕಾರವು ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 339 ಎಂಎಸ್ಎಸ್ 2004, ಬೆಂಗಳೂರು, ದಿನಾಂಕ: 28ನೇ ಮೇ 2004**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಲ್ಲಿರುವ "ಅಪರ ನಿರ್ದೇಶಕರು (ಸಿ.ಎಂ.ಡಿ)" ಈ ಹುದ್ದೆಯ ಪದನಾಮವನ್ನು "ಯೋಜನಾ ನಿರ್ದೇಶಕರು (ಐ.ಡಿ.ಎಸ್)" ಎಂದು ಪುನರ್ ಪದನಾಮಿಕರಣ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 613

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 43 ಸಸಿವಿ 2003, ದಿನಾಂಕ: 3.6.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 3.6.2003ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 22.4.2003 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಎಂದು ಉನ್ನತೀಕರಿಸಲಾಗಿದೆ. ಹಾಗೂ ಈ ಹುದ್ದೆಗೆ ಹೊಂದಿಕೊಂಡಂತೆ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸಹ ನಿಗದಿಪಡಿಸಲಾಗಿರುತ್ತದೆ.

| | | |
|---|---|---|
| 1 | **ಆಪ್ತ ಕಾರ್ಯದರ್ಶಿ**<br>ಕ.ಸ.ಸ.ದ. ಉಪ ಕಾರ್ಯದರ್ಶಿ : ಅಧೀನ ಕಾರ್ಯದರ್ಶಿ:<br>ಆಪ್ತ ಕಾರ್ಯದರ್ಶಿ ಗ್ರೇಡ್-1 : ಆಪ್ತ ಕಾರ್ಯದರ್ಶಿ ಗ್ರೇಡ್-2 ಅಥವಾ<br>ಕೆ.ಎ.ಎಸ್. ಹಿರಿಯ ಶ್ರೇಣಿ : ಕಿರಿಯ ಶ್ರೇಣಿ ಅಧಿಕಾರಿ | 1 ಹುದ್ದೆ |
| 2 | ಪತ್ರಾಂಕಿತ ಆಪ್ತ ಸಹಾಯಕ : ಹಿರಿಯ ಶೀಘ್ರಲಿಪಿಗಾರ | 3 ಹುದ್ದೆಗಳು |
| 3 | ಶಾಖಾಧಿಕಾರಿ : ಹಿರಿಯ ಸಹಾಯಕ | 1 ಹುದ್ದೆ |
| 4 | ಕಿರಿಯ ಸಹಾಯಕ : ಸಹಾಯಕ | 3 ಹುದ್ದೆಗಳು |
| 5 | ಹಿರಿಯ ಬೆರಳಚ್ಚುಗಾರರು | 1 ಹುದ್ದೆ |
| 6 | ವಾಹನ ಚಾಲಕ | 1 ಹುದ್ದೆ |
| 7 | ದಲಾಯತ್ | 4 ಹುದ್ದೆಗಳು |

ಪ್ರಸ್ತುತ ಈ ಹುದ್ದೆಗಳ ಒಂದು ವರ್ಷದ ಕಾಲಾವಧಿಯು ದಿನಾಂಕ: 21.4.2004 ಕ್ಕೆ ಮುಕ್ತಾಯಗೊಂಡಿರುತ್ತದೆ. ಆದುದರಿಂದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 22.4.2004 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 2004, ಬೆಂಗಳೂರು, ದಿನಾಂಕ: 19ನೇ ಮೇ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 22.4.2004 ರಿಂದ 31.3.2005 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| 1 | ಆಪ್ತ ಕಾರ್ಯದರ್ಶಿ<br>ಕ.ಸ.ಸ.ದ. ಉಪ ಕಾರ್ಯದರ್ಶಿ : ಅಧೀನ ಕಾರ್ಯದರ್ಶಿ:<br>ಆಪ್ತ ಕಾರ್ಯದರ್ಶಿ ಗ್ರೇಡ್-1 : ಆಪ್ತ ಕಾರ್ಯದರ್ಶಿ ಗ್ರೇಡ್-2 ಅಥವಾ<br>ಕೆ.ಎ.ಎಸ್. ಹಿರಿಯ ಶ್ರೇಣಿ : ಕಿರಿಯ ಶ್ರೇಣಿ ಅಧಿಕಾರಿ | 1 ಹುದ್ದೆ |
|---|---|---|
| 2 | ಪತ್ರಾಂಕಿತ ಆಪ್ತ ಸಹಾಯಕ : ಹಿರಿಯ ಶೀಘ್ರಲಿಪಿಗಾರ | 3 ಹುದ್ದೆಗಳು |
| 3 | ಶಾಖಾಧಿಕಾರಿ : ಹಿರಿಯ ಸಹಾಯಕ | 1 ಹುದ್ದೆ |
| 4 | ಕಿರಿಯ ಸಹಾಯಕ : ಸಹಾಯಕ | 3 ಹುದ್ದೆಗಳು |
| 5 | ಹಿರಿಯ ಬೆರಳಚ್ಚುಗಾರರು | 1 ಹುದ್ದೆ |
| 6 | ವಾಹನ ಚಾಲಕ | 1 ಹುದ್ದೆ |
| 7 | ದಲಾಯತ್ | 4 ಹುದ್ದೆಗಳು |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 614

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** 2004-05 ನೇ ಸಾಲಿಗೆ ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ವಿಶಿಷ್ಠ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ರಾಜೀವ್ ಗಾಂಧಿ ಪರಿಸರ ಪ್ರಶಸ್ತಿ ಪ್ರಧಾನ ಮಾಡುವ ಬಗ್ಗೆ

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ. ಅಪಜೀ 20 ಇಎನ್‌ಜಿ 2003 ದಿನಾಂಕ.14-5-2003
2. ಸರ್ಕಾರದ ಆದೇಶ ಸಂಖ್ಯೆ. ಅಪಜೀ 20 ಇಎನ್‌ಜಿ 2003 ದಿನಾಂಕ: 14-5-2003
3. ಆಯ್ಕೆ ಸಮಿತಿಯ ಅಧ್ಯಕ್ಷರ ದಿನಾಂಕ: 31-5-2003 ರ ವರದಿ
4. ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಬರೆದಿರುವ ಇದೇ ಸಮಸಂಖ್ಯೆ. ದಿನಾಂಕ: 4-5-2004ರ ಅರೆ ಸರ್ಕಾರಿ ಪತ್ರ
5. ದಿನಾಂಕ: 5.5.2004 ರ ಪತ್ರಿಕಾ ಪ್ರಕಟಣೆ.
6. ಸರ್ಕಾರದ ಆದೇಶ ಸಂಖ್ಯೆ. ಅಪಜೀ 20 ಇಎನ್‌ಜಿ 2003 ದಿನಾಂಕ: 10-5-2004.
7. ಸರ್ಕಾರದ ಆದೇಶ ಸಂಖ್ಯೆ. ಅಪಜೀ 20 ಇಎನ್‌ಜಿ 2003 ದಿನಾಂಕ: 25-5-2004
8. ಆಯ್ಕೆ ಸಮಿತಿಯ ಶಿಫಾರಸ್ಸು ಮತ್ತು ವರದಿ.

**ಪ್ರಸ್ತಾವನೆ:**

2004-05 ನೇ ಸಾಲಿನಲ್ಲಿ ರಾಜೀವ್‌ಗಾಂಧಿ ಪರಿಸರ ಪ್ರಶಸ್ತಿಗೆ ಉಲ್ಲೇಖ (4) ಮತ್ತು (5) ರ ಪತ್ರ ಮತ್ತು ಪತ್ರಿಕಾ ಪ್ರಕಟಣೆ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಪರಿಸರ ಸಂರಕ್ಷಣೆಗಾಗಿ ವ್ಯಕ್ತಿ ಮತ್ತು ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವುದು ಪ್ರಶಸ್ತಿಯ ಉದ್ದೇಶ. ಈ ಪ್ರಶಸ್ತಿ ತಲಾ ರೂ. 1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ನಗದು ಹಾಗೂ ಪ್ರಶಸ್ತಿಪತ್ರವನ್ನು ಒಳಗೊಂಡಿರುತ್ತದೆ. ರಾಜೀವ್‌ಗಾಂಧಿ ಪರಿಸರ ಪ್ರಶಸ್ತಿಯನ್ನು ವ್ಯಕಿ ಮತ್ತು ಸಂಸ್ಥೆಗಳು (ಸರ್ಕಾರಿ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ, ಟ್ರಸ್ಟ್‌ಗಳು ಇತರೆ) (1) ಪರಿಸರ ಸಂರಕ್ಷಣೆ ಮತ್ತು (2) ಪರಿಸರ ವ್ಯವಸ್ಥಾಪನೆ ಮತ್ತು ಕ್ಷೇತ್ರಗಳಲ್ಲಿ ಆರಂಭಶೀಲತೆ / ಕೊಡುಗೆ/ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ಈ ಪ್ರಶಸ್ತಿಗಳನ್ನು ರಾಜ್ಯದ ಮಲೆನಾಡು ಕರಾವಳಿ, ಹಳೆ ಮೈಸೂರು, ಹೈದರಾಬಾದ್ - ಕರ್ನಾಟಕ, ಮುಂಬೈ- ಕರ್ನಾಟಕ ಮತ್ತು ಬೆಂಗಳೂರು (ನಗರ ಮತ್ತು ಗ್ರಾಮೀಣ ಜಿಲ್ಲೆಗಳು) ಪ್ರದೇಶಗಳಲ್ಲಿ ಅಸಾಧಾರಣ ಸೇವೆ ಸಲ್ಲಿಸಿರುವವರಿಗೆ ಪ್ರಧಾನ ಮಾಡಲಾಗುವುದು. ರಾಜ್ಯದ ಮೇಲೆ ಸೂಚಿಸಲಾದ ಪ್ರದೇಶಗಳಿಗೆ ಒಂದೊಂದಕ್ಕೆ ಎರಡು ಪ್ರಶಸ್ತಿಗಳನ್ನು ಅಂದರೆ ಒಂದನ್ನು ವ್ಯಕ್ತಿಗಳ ವರ್ಗ ಮತ್ತು ಇನ್ನೊಂದನ್ನು ಸಂಸ್ಥೆಗಳ ವರ್ಗದಲ್ಲಿ ನೀಡಲು ಪರಿಶೀಲಿಸಿದೆ. ಸಮಗ್ರ ರಾಜ್ಯದಲ್ಲಿ ಒಟ್ಟಾರೆ ಹನ್ನೆರಡು ಪ್ರಶಸ್ತಿಗಳನ್ನು ನೀಡಲಾಗುವುದು. ಮೇಲೆ (6) ರಲ್ಲಿ ಸರ್ಕಾರದ ಆದೇಶದನ್ವಯ ಪ್ರಶಸ್ತಿಗಾಗಿ ಅರ್ಹರನ್ನು ಆಯ್ಕೆ ಮಾಡುವ ಸಲುವಾಗಿ ಆಯ್ಕೆ ಸಮಿತಿಯನ್ನು ರಚಿಸಲು ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ಉಲ್ಲೇಖ (7) ರಲ್ಲಿನ ಸರ್ಕಾರದ ಆದೇಶದನ್ವಯ ಪ್ರಶಸ್ತಿಗಾಗಿ ಅರ್ಹರನ್ನು ಆಯ್ಕೆ ಮಾಡುವ ಸಲುವಾಗಿ ಆಯ್ಕೆ ಸಮಿತಿಯನ್ನು ರಚಿಸಲಾಗಿದೆ. ಆಯ್ಕೆ ಸಮಿತಿಯು ಉಲ್ಲೇಖ (8)ರಲ್ಲಿ ಸೂಚಿಸಿರುವಂತೆ ಶಿಫಾರಸ್ಸಿನೊಂದಿಗೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ. ಸರ್ಕಾರವು ಆಯ್ಕೆ ಸಮಿತಿಯ ಶಿಫಾರಸ್ಸನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 72 ಇಎನ್‌ಜಿ 2004, ಬೆಂಗಳೂರು, ದಿನಾಂಕ: 3ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳಿಗೆ, 2004-05 ನೇ ಸಾಲಿನಲ್ಲಿ, ರಾಜೀವ್ ಗಾಂಧಿ ಪರಿಸರ ಪ್ರಶಸ್ತಿ ನೀಡಲು ಆಯ್ಕೆ ಸಮಿತಿಯು ಮಾಡಿರುವ ಶಿಫಾರಸ್ಸುಗಳನ್ನು ಪರಿಶೀಲಿಸಿದ ನಂತರ, ಸರ್ಕಾರ, ಈ ಕೆಳ ಕಾಣಿಸಿದ ವ್ಯಕ್ತಿ

ಮತ್ತು ಸಂಸ್ಥೆಗಳಿಗೆ ರಾಜೀವ್‌ಗಾಂಧಿ ಪರಿಸರ ಪ್ರಶಸ್ತಿ ಪ್ರಧಾನ ಮಾಡಿದೆ. ಸದರಿ ಪ್ರಶಸ್ತಿಯು ರೂ. 1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ನಗದು ಮತ್ತು ಪ್ರಶಸ್ತಿ ಪತ್ರ ಒಳಗೊಂಡಿರುತ್ತದೆ.

| ಕ್ರಮ ಸಂಖ್ಯೆ | ಪ್ರದೇಶ | ವ್ಯಕಿ ಶ್ರೀ/ಶ್ರೀಮತಿ | ಸಂಸ್ಥೆ |
|---|---|---|---|
| 1. | ಹೈದರಾಬಾದ್ - ಕರ್ನಾಟಕ | ಶ್ರೀ ಮುಕುಂದ ಮೈಗುರ, ಕ್ರಿಯಾಶೀಲಾ ಗೆಳೆಯರು, ಪರಿಮಳ ಬಿಲ್ಡಿಂಗ್, ಮಾಲಾಮಡ್ಡಿ, 6ನೇ ಅಡ್ಡರಸ್ತೆ, ಧಾರವಾಡ-580 007 | ವಿಶ್ವ ಸೇವಾ ಮಿಷನ್, ಗುಬ್ಬಿ ಕಾಲೋನಿ, ಗುಲ್ಬರ್ಗ - 585 105 |
| 2. | ಕರಾವಳಿ | - | ಮಣಿಪಾಲ್ ಅಕಾಡೆಮಿ ಆಫ್ ಹೈಯರ್ ಎಜುಕೇಷನ್, ಮಣಿಪಾಲ್ |
| 3. | ಮಲೆನಾಡು | ಶ್ರೀ ಸಿ.ಎನ್. ಅಶೋಕ್, ಮಹಾತ್ಮಗಾಂಧಿ ಬಡಾವಣೆ, ಶಾಲಿನಿ ಕಾನ್ವೆಂಟ್ ರಸ್ತೆ, ಚನ್ನರಾಯ ಪಟ್ಟಣ, ಹಾಸನ ಜಿಲ್ಲೆ. | ಚಿಂತನಾ ಫೌಂಡೇಶನ್, ಅಜ್ಜಂಪುರ-577 457 ತರೀಕೆರೆ ತಾಲ್ಲೂಕ್, ಚಿಕ್ಕಮಗಳೂರು ಜಿಲ್ಲೆ. |
| 4. | ಮುಂಬೈ-ಕರ್ನಾಟಕ | ಶ್ರೀಮತಿ ಪೂರ್ಣಿಮಾ ಅಶೋಕ್ ಗೌರೊಜಿ (ಗೌರೊಜಿ ಆಸ್ಪತ್ರೆ), ಕಲ್ಪವೃಕ್ಷ, ನಂ. 38, ರಾಮದುರ್ಗ- 591 123 ಬೆಳಗಾಂ ಜಿಲ್ಲೆ. | ಸ್ಪಂದನಾ ಸ್ವಯಂ ಸೇವಾ ಸಂಸ್ಥೆ 1ನೇ ಮಹಡಿ, ಮೆ. ಬಿಳಗಿ ಮೆಡಿಕಲ್ ಸ್ಟೋರ್ಸ್, ರಾಮದುರ್ಗ-391123 ಬೆಳಗಾಂ ಜಿಲ್ಲೆ. |
| 5. | ಹಳೇ ಮೈಸೂರು | ಡಾ: ಎಲ್. ಹನುಮಯ್ಯ, ನಂ.136, 1ನೇ ಕ್ರಾಸ್, 5ನೇ ಬ್ಲಾಕ್, ಕೋರಮಂಗಲ ಬಡಾವಣೆ, ಬೆಂಗಳೂರು-560 095. | ಧ್ವನಿ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಟಿ.ಬಿ ಬಡಾವಣೆ, ನಾಗಮಂಗಲ, ಮಂಡ್ಯ ಜಿಲ್ಲೆ-571 432 |
| 6. | ಬೆಂಗಳೂರು (ಗ್ರಾಮಾಂತರ ಮತ್ತು ನಗರ) | ಶಿವಮಲ್ಲು, ಭಾರತೀಯ ಸಮಾಜ ಸೇವಾ ಟ್ರಸ್ಟ್, (ರಿ) 36/1, 5ನೇ ಮುಖ್ಯ ರಸ್ತೆ, ನಂಜಾಂಬ ಅಗ್ರಹಾರ, ಚಾಮರಾಜ ಪೇಟೆ, ಬೆಂಗಳೂರು-18 | 1. ಬೆಂಗಳೂರು ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿ, ಕಾವೇರಿ ಭವನ, ಬೆಂಗಳೂರು. 2. ರೈಲ್‌ವೀಲ್ ಕಾರ್ಖಾನೆ, ಯಲಹಂಕ, ಬೆಂಗಳೂರು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ.ಆರ್.ಗಾಯ್ಕವಾಡ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್-617

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ (ಕ್ರೋಢೀಕರಣ) ಶಾಖೆಗೆ ಸೃಜಿಸಿರುವ ಹುದ್ದೆಗಳ ಮುಂದುವರಿಕೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 93, ದಿನಾಂಕ: 8.1.1996.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 96, ದಿನಾಂಕ: 25.1.1997.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 42 ಸಸಿವಿ 97, ದಿನಾಂಕ: 7.1.1998.
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 31 ಸಸಿವಿ 99, ದಿನಾಂಕ: 10.8.1999.
5) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 2003, ದಿನಾಂಕ: 13.6.2003.
6) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 98, ದಿನಾಂಕ: 18.10.2001.
7) ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಂವ್ಯಶಾಇ 64 ಆಡಳಿತ 2004, ದಿನಾಂಕ: 2.4.2004.

**ಪ್ರಸ್ತಾವನೆ:**

1961 ರಿಂದ 1994 ರವರೆಗಿನ ಅಧಿನಿಯಮಗಳನ್ನು ಕ್ರೋಢೀಕರಿಸುವ ಉದ್ದೇಶದಿಂದ ಸಂಸದೀಯ ವ್ಯವಹಾರಗಳ ಮತ್ತು ಶಾಸನ ರಚನೆ ಇಲಾಖೆಯ (ಹಿಂದಿನ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆ) ಅಧೀನದಲ್ಲಿ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ, ಕೆಳಕಂಡ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

| | |
|---|---|
| 1. ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ | 1 ಹುದ್ದೆ |
| 2. ಶೀಘ್ರಲಿಪಿಗಾರರು | 1 ಹುದ್ದೆ |
| 3. ಬೆರಳಚ್ಚುಗಾರರು | 1 ಹುದ್ದೆ |

ಮೇಲ್ಕಂಡ ಹುದ್ದೆಗಳನ್ನು ಕ್ರಮ ಸಂಖ್ಯೆ (2) (3) ಹಾಗೂ (5)ರ ಸರ್ಕಾರದ ಆದೇಶಗಳಲ್ಲಿ ದಿನಾಂಕ: 31.3.2004 ರವರೆಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ: 18.10.2001ರ ಸರ್ಕಾರದ ಆದೇಶದಲ್ಲಿ ಸಂಸದೀಯ ವ್ಯವಹಾರ ಮತ್ತು ಶಾಸನ ರಚನೆ ಇಲಾಖೆ ಕ್ರೋಢೀಕರಣ ಶಾಖೆಯ ಒಂದು ಬೆರಳಚ್ಚುಗಾರ ಹುದ್ದೆಯನ್ನು ರದ್ದುಪಡಿಸಲಾಗಿರುತ್ತದೆ.

ಸಹಾಯಕ ಪ್ರಾರೂಪಕಾರರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರ ಮತ್ತು ಶಾಸನ ರಚನೆ ಇಲಾಖೆ ಇವರು ಕ್ರಮ ಸಂಖ್ಯೆ (7) ರಲ್ಲಿ ಓದಲಾದ ದಿನಾಂಕ: 2.4.2004 ರ ಅನಧಿಕೃತ ಟಿಪ್ಪಣಿಯಲ್ಲಿ ಕ್ರೋಢೀಕರಣ ಶಾಖೆಯ ಹುದ್ದೆಗಳನ್ನು ಖಾಯಂಗೊಳಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 24 ಸಸಿವಿ 2004, ಬೆಂಗಳೂರು, ದಿನಾಂಕ: 6ನೇ ಮೇ 2004**

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ (ಹಿಂದಿನ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆ) ಕ್ರೋಢೀಕರಣ ಶಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಕೆಳಕಂಡ ಹುದ್ದೆಗಳನ್ನು ದಿನಾಂಕ: 1.4.2004 ರಿಂದ ದಿನಾಂಕ: 31.3.2005 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | |
|---|---|
| 1. ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ | 1 ಹುದ್ದೆ |
| 2. ಶೀಘ್ರಲಿಪಿಗಾರರು | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರ ಮೇರೆಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 618

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಕಾರ್ಯದರ್ಶಿ (ಸಂಪನ್ಮೂಲಗಳು) ಆರ್ಥಿಕ ಇಲಾಖೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 95, ದಿನಾಂಕ: 22.7.1995.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 96, ದಿನಾಂಕ: 22.8.1996.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸಸಿವಿ 97, ದಿನಾಂಕ: 7.5.1997.
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸಸಿವಿ 98, ದಿನಾಂಕ: 25.5.1998.
5) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 99, ದಿನಾಂಕ: 15.5.1999.
6) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 13 ಸಸಿವಿ 2000, ದಿನಾಂಕ: 10.4.2000.
7) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 2001, ದಿನಾಂಕ: 30.3.2001.
8) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 2002, ದಿನಾಂಕ: 4.6.2002.
9) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 2002(1), ದಿನಾಂಕ: 4.6.2002.
10) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 2003, ದಿನಾಂಕ: 28.3.2003.
11) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33 ಸಸಿವಿ 2003, ದಿನಾಂಕ: 7.4.2003.
12) ಕಾರ್ಯದರ್ಶಿ (ಸಂಪನ್ಮೂಲ) ಆರ್ಥಿಕ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಆಇ 2171 ಕಾ (ಅ ಮತ್ತು ಸಂ) 2004, ದಿನಾಂಕ: 5.5.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿ ಐ.ಎ.ಎಸ್. ಸೂಪರ್ ಟೈಂ ವೇತನ ಶ್ರೇಣಿಯ 'ಸರ್ಕಾರದ ಕಾರ್ಯದರ್ಶಿ (ಪ್ರಾಜೆಕ್ಟ್ ಫೈನಾನ್ಸ್)' ಎಂಬ ಹೊಸ ಹುದ್ದೆಯನ್ನು ಕೆಳಕಂಡ ಪೂರಕ ಸಿಬ್ಬಂದಿಯೊಡನೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ. ಸದರಿ ಹುದ್ದೆಯನ್ನು ತದನಂತರ ಕಾರ್ಯದರ್ಶಿ-2, ಆರ್ಥಿಕ ಇಲಾಖೆ (ಸಂಪನ್ಮೂಲಗಳು) ಹುದ್ದೆ ಎಂದು ಪದನಾಮಾಂಕಿತಗೊಂಡಿದೆ.

| | |
|---|---|
| 1. ಭಾಷಾಂತರಕಾರರು (ಶಾಖಾಧಿಕಾರಿ : ಹಿರಿಯ ಸಹಾಯಕ) | 1 ಹುದ್ದೆ |
| 2. ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. ಕಿರಿಯ ಸಹಾಯಕರು | 1 ಹುದ್ದೆ |
| 4. ದಲಾಯತ್ | 2 ಹುದ್ದೆಗಳು |

ಮೇಲಿನ ಕ್ರಮ ಸಂಖ್ಯೆ (8) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯ ಕಾರ್ಯದರ್ಶಿ (ಸಂಪನ್ಮೂಲಗಳು) ಹುದ್ದೆಯನ್ನು ದಿನಾಂಕ: 1.12.2001 ರಿಂದ ಜಾರಿಗೆ ಬರುವಂತೆ ಕಾರ್ಯದರ್ಶಿ (ಆಯವ್ಯಯ) ಎಂದು ಮರು ಪದನಾಮೀಕರಿಸಲಾಗಿದೆ.

ಮೇಲ್ಕಂಡ ಹುದ್ದೆಗಳನ್ನು ಕ್ರಮ ಸಂಖ್ಯೆ (2) (3) (4) (5) (6) (7) ಹಾಗೂ (9) ರ ಸರ್ಕಾರದ ಆದೇಶಗಳಲ್ಲಿ ಕಾಲಾನುಕಾಲಕ್ಕೆ ಮುಂದುವರೆಸಲಾಗುತ್ತಿದೆ.

ಮೇಲೆ ಕ್ರಮ ಸಂಖ್ಯೆ (10) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಆರ್ಥಿಕ ಇಲಾಖೆಯ ಕಾರ್ಯದರ್ಶಿ (ಆಯವ್ಯಯ) ಹುದ್ದೆಯನ್ನು ಕಾರ್ಯದರ್ಶಿ (ಸಂಪನ್ಮೂಲಗಳು) ಎಂದು ಮರು ಪದನಾಮೀಕರಿಸಲಾಗಿದೆ. ಹಾಗೂ ಕ್ರಮ ಸಂಖ್ಯೆ (11) ರಲ್ಲಿ ಓದಲಾದ ದಿನಾಂಕ: 7.4.2003 ರ ಸರ್ಕಾರದ ಆದೇಶದಲ್ಲಿ, ಕಾರ್ಯದರ್ಶಿ (ಸಂಪನ್ಮೂಲಗಳು) ಆರ್ಥಿಕ ಇಲಾಖೆ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2003 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದ್ದು, ಪ್ರಸ್ತುತ ಈ ವಿಸ್ತರಿತ ಅವಧಿಯು ದಿನಾಂಕ: 31.3.2004 ಕ್ಕೆ ಮುಕ್ತಾಯಗೊಂಡಿರುತ್ತದೆ.

ಸದರಿ ಹುದ್ದೆಗಳನ್ನು ದಿನಾಂಕ: 1.4.2004 ರಿಂದ ಮುಂದುವರೆಸುವಂತೆ ಆರ್ಥಿಕ ಇಲಾಖೆಯು ಕ್ರಮ ಸಂಖ್ಯೆ (12) ರಲ್ಲಿ ಓದಲಾದ ದಿನಾಂಕ: 5.5.2004 ರ ಟಿಪ್ಪಣಿಯಲ್ಲಿ ಪ್ರಸ್ತಾವನೆ ಸಲ್ಲಿಸಿದ್ದು, ಇದನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 36 ಸಸಿವಿ 2004, ಬೆಂಗಳೂರು, ದಿನಾಂಕ: 19ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರದ ಕಾರ್ಯದರ್ಶಿ (ಸಂಪನ್ಮೂಲಗಳು) ಆರ್ಥಿಕ ಇಲಾಖೆ ಹುದ್ದೆ ಹಾಗೂ ಆ ಹುದ್ದೆಗೆ ಹೊಂದಿಕೊಂಡಿರುವ ಆಪ್ತ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2004 ರಿಂದ 31.3.2005 ರವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ, ಮುಂದುವರೆಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 619

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕವಿಪ:ಆ-1:ಸ ಆಶಾ:ವಿಕಅ:22:2004, ಬೆಂಗಳೂರು, ದಿನಾಂಕ: 5ನೇ ಜೂನ್ 2004**

ಶ್ರೀ ವಿ. ನಾರಾಯಣಸ್ವಾಮಿ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರನ್ನು ಅವರದೇ ಆದ ವೇತನ ಮತ್ತು ವೇತನ ಶ್ರೇಣಿಯಲ್ಲಿ ಹಾಗೂ ಜೊತೆಗೆ ಲಭ್ಯವಿರುವ ವಿಶೇಷ ವೇತನದೊಂದಿಗೆ ದಿನಾಂಕ: 1.6.2004 ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಸದರಿಯವರ ಸೇವೆಯನ್ನು ಮಾನ್ಯ ಸಭಾಪತಿಯವರು ಇಚ್ಛಿಸುವವರೆಗೆ ಅಥವಾ ಮಾನ್ಯ ಸಭಾಪತಿಯವರ ಅಧಿಕಾರವಧಿ ಮುಗಿಯುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನಿಯೋಜನೆ ಮೇರೆಗೆ ವಿಧಾನ ಪರಿಷತ್ತಿನ ಮಾನ್ಯ ಸಭಾಪತಿಯವರ ವಿಶೇಷ ಕರ್ತವ್ಯಾಧಿಕಾರಿಯಾಗಿ ಮುಂದುವರಿಸಲಾಗಿದೆ.

ಸಭಾಪತಿಯವರ ಆದೇಶಾನುಸಾರ

ಪಿ.ಆರ್. 623

**ಕೆ. ಮಹಾರಾಜನ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತು.

## ಲೋಕೋಪಯೋಗಿ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ: ಲೋಇ 11 ಬನೌಸೇ 2004, ಬೆಂಗಳೂರು, ದಿನಾಂಕ: 2ನೇ ಜೂನ್ 2004**

ಸರ್ಕಾರದ ಆದೇಶ ಸಂಖ್ಯೆ: ಲೋಇ 3 ಬನೌಸೇ 2000(1) ದಿನಾಂಕ: 10.10.2003ರ ಆದೇಶ ಭಾಗದ ಖಂಡಿಕೆ 1 ರಲ್ಲಿನ 3ನೇ ಸಾಲಿನಲ್ಲಿ ನಮೂದಿಸಿರುವ "ಸಹಾಯಕ ಕಾರ್ಯಪಾಲಕ ಇಂಜಿನಿಯರ್" ಎಂಬ ಪದಗಳನ್ನು "ಸಹಾಯಕ ಕಾರ್ಯಪಾಲಕ ಇಂಜಿನಿಯರ್, ವಿಭಾಗ-I" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು. ಹಾಗೂ ಸದರಿ ಖಂಡಿಕೆಯ 6 ಮತ್ತು 7ನೇ ಸಾಲಿನಲ್ಲಿ ಬರುವ "ಇನ್ನು ಮುಂದೆ ಈ ಎಲ್ಲಾ 5 ಹುದ್ದೆಗಳನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್" ಎಂಬ ಪದಗಳಿಗೆ ಬದಲಾಗಿ "ಇನ್ನು ಮುಂದೆ ಈ ಎಲ್ಲಾ 5 ಹುದ್ದೆಗಳ ಪೈಕಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ವಿಭಾಗ-I ಈ ಒಂದು ಹುದ್ದೆಯನ್ನು ಹೊರತುಪಡಿಸಿ, ಉಳಿದ 4 ಹುದ್ದೆಗಳನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್, ವಿಭಾಗ-II" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 624

**ಎಸ್. ಚಂದ್ರಶೇಖರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ)